॥ ಶ್ರೀಮತೇ ರಾಮಾನುಜಾಯ ನಮಃ ॥



# ಶ್ರೀಮದ್ರಾಮಾನುಜ ನೂರಂತ್ಯಾದಿ

(ಇರಾಮಾನುಶ ನೂತ್ತ್ರಂದಾದಿ)

* * * * *

ಕನ್ನಡಾನುವಾದಕ ಸಂಪಾದಕ


**ಪ್ರೊ॥ ಹಾರೋಹಳ್ಳಿ ತಿರುವೇಂಗಡ ಶರ್ಮಾ**

(ಹೆಚ್. ಪುಟ್ಟಸ್ವಾಮಿ, ಎಂ.ಎಸ್ಸಿ., ಎಫ್.ಎಂ.ಎಸ್.,)



**1994**

ಪ್ರಿಂಟ್ ಷಾಪ್, ಮೈಸೂರು-24

॥ ಶ್ರೀಮತೇ ರಾಮಾನುಜಾಯ ನಮಃ ॥







॥ ಶ್ರೀಯೈ ನಮಃ ಶ್ರೀಧರಾಯ ನಮಃ ॥

# ಶ್ರೀಮದ್ರಾಮಾನುಜ ನೂರಂತ್ಯಾದಿ

(ಇರಾಮಾನುಶ ನೂತ್ತಂದಾದಿ)

THIS BOOK IS PUBLISHED WITH
THE FINANCIAL ASSISTANCE OF
TIRUMALA TIRUPATI DEVASTHANAMS
UNDER THEIR SCHEME
AID TO PUBLISH RELIGIOUS BOOKS

ಕನ್ನಡಾನುವಾದಕ ಸಂಪಾದಕ

ಪ್ರೊ॥ ಹಾರೋಹಳ್ಳಿ ತಿರುವೇಂಗಡ ಶರ್ಮಾ

(ಹೆಚ್. ಪುಟ್ಟಸ್ವಾಮಿ, ಎಂ.ಎಸ್ಸಿ., ಎಫ್.ಎಂ.ಎಸ್.,)

1994

"SRIMADRAMANUJA NOORANTHYADI" Kannada Version of "Iramanusha Noothandadi" with word by word meaning with notes and also published by Prof. Harohalli Thiruvengada Sharma *Alias* H. Puttaswamy, Retd. Prof. of Geology, No. 347, Shanthi Marga, Siddarthanagar, I Stage, Mysore-570 011. Printed at "Print Shop" Krishnavilas Road, Mysore-570 024. 1/8 Demmy PP ೧೪+108.



ಪ್ರಥಮ ಮುದ್ರಣ 1994 – 1000 ಪ್ರತಿಗಳು.

**ಬೆಲೆ : ರೂ. 18–00**

**ದೊರೆಯುವ ಸ್ಥಳ :**

**ವೇದಾಂತ ಬುಕ್ ಹೌಸ್**
ಗವಿಪುರಂ ರಸ್ತೆ (ಉಮಾ ಟಾಕೀಸ್ ಬಳಿ),
ಚಾಮರಾಜಪೇಟೆ, ಬೆಂಗಳೂರು–560 018.

**ಗೀತಾ ಬುಕ್ ಹೌಸ್**
ಕೆ. ಆರ್. ಸರ್ಕಲ್, ಮೈಸೂರು.

**ಶ್ರೀ ವಿ. ನರಸಿಂಹಯ್ಯ,** B.Sc., I.C.W.A.,
682, ೮ಬಿ ಮುಖ್ಯ ರಸ್ತೆ
H.S.R. ಲೇಔಟ್, ಸೆಕ್ಟರ್ 7, ಬೊಮ್ಮನಹಳ್ಳಿ
ಮಡಿವಾಳ ಪೋಸ್ಟ್, ಬೆಂಗಳೂರು–560 068.

**ಶ್ರೀ ಸತ್ಯನಾರಾಯಣಸ್ವಾಮಿ**
ನಿವೃತ್ತ ಆರೋಗ್ಯ ತನಿಖಾಧಿಕಾರಿ
ಗಾಂಧಿನಗರ, ನಂಜನಗೂಡು, ಮೈಸೂರು ಜಿಲ್ಲೆ.

**ಶ್ರೀ ಹೆಚ್. ಪಿ. ಅಶ್ವತ್ಥಕುಮಾರ್,** B.E. (Mech.)
347, ಶಾಂತಿಮಾರ್ಗ, 1ನೇ ಹಂತ
ಸಿದ್ಧಾರ್ಥನಗರ, ಮೈಸೂರು–570 011.

# ಶ್ರೀ ರಾ ಮಾ ನು ಜಾ ಚಾ ರ್ಯ ರು



ಶ್ರೀಪೆರಂಬೂದೂರಿನಲ್ಲಿ ಅಲಂಕೃತರಾಗಿರುವ
ಉತ್ಸವಮೂರ್ತಿ



# ಯದುಗಿರಿ ಯತಿರಾಜ ಮಠ

**ತಿರುನಾರಾಯಣಪುರಂ (ಮೇಲುಕೋಟೆ), ಮಂಡ್ಯ ಜಿಲ್ಲೆ.**

ಶ್ರೀಮತೇ ರಾಮಾನುಜಾಯ ನಮಃ

**ಗುರುಹೀನೇ ಗೃಹೇ ವಿಪ್ರಸಕೃತ್ ಕಾಲಂ ನವಾಸ್ಯಕಂ ।**
**ಆಚಾರ್ಯವಾನ್ ಪುರುಷೋ ವೇದ**
**ಯಸ್ಯ ದೇವೇ ಪರಾಭಕ್ತಿಃ ಯಥಾದೇವೇ ತಥಾ ಗುರೌ ॥**

ಎಂಬುದಾಗಿ ಆಚಾರ್ಯರನ್ನು ದೇವತೆಯಂತೆ ಪೂಜಿಸಬೇಕು. ಗುರುಗಳಿಲ್ಲದ ಗ್ರಾಮ ಮತ್ತು ಗುರುಗಳ ಸಂಬಂಧವಿಲ್ಲದ ಗೃಹ, ಮನೆಗಳಲ್ಲಿ ಊಟ ಮಾಡಬಾರದು. ಆಚಾರ್ಯನು ವೇದ ಪುರುಷನಿಗೆ ಸಮಾನನು ದೇವರಲ್ಲಿದುವಂತೆಯೇ ಆಚಾರ್ಯರಲ್ಲಿಯೂ ಭಕ್ತಿ, ಪ್ರೀತಿಗಳನ್ನಿಡಬೇಕು.

**ಭಕ್ತ ಪ್ರತಿಷ್ಠಾ ಹೀನೇಚ..........................**
**ತೀರ್ಥಪ್ರಸಾದ ಸ್ವೀಕಾರಂ ಪ್ರಪನ್ನೋ ವರ್ಜಯೇತ್ತಥಾ ।**
**ಯತ್ರ ಭಗವತ್ಪ್ರತಿಷ್ಠಾ ಚ ಪೂಜನಂ ಕುರುತೇಯದಿ**
**ತತ್ರ ಪ್ರಸಾದ ತೀರ್ಥಂಚ ಗೃಹ್ಯಂತೇ ವಿಷ್ಣುಪಾರಗೈಃ ॥**

—ಹಿರಣ್ಯ ಗರ್ಭ ಸಂಹಿತೆ

ಈ ರೀತಿ ಶಾಸ್ತ್ರಮರ್ಯಾದೆ ಇರುವಾಗ ವೇದಾಂತೋಪದೇಶಿಕರಾದ ಆಳ್ವಾರಾಚಾರ್ಯರನ್ನು ದೇವಸ್ಥಾನಗಳಲ್ಲಿ ಪ್ರತಿಷ್ಠಿಸಿ ಪೂಜಿಸುವುದಲ್ಲದೆ, ಅವರು ಬರೆದ ಗ್ರಂಥಗಳು ಮುಂದಿನವರಿಗೆ ಉಪದೇಶಿಸಲ್ಪಡುತ್ತಿವೆ. ಈ ವಿಚಾರಗಳನ್ನೆಲ್ಲಾ ಕೂರತ್ತಾಳ್ವಾರರು ವಿಮರ್ಶಿಸಿ ಇದೇ ರೀತಿ ನಡೆಯಬೇಕೆಂಬ ಆಚಾರ ವಿಚಾರಗಳನ್ನೂ ನೀತಿನಿಯಮಗಳನ್ನೂ ರಾಮಾನುಜರಲ್ಲಿ ಬಿನ್ನವಿಸಿಕೊಳ್ಳಲು, ಶ್ರೀಮದ್ರಾಮಾನುಜರ ಆಜ್ಞೆಯಂತೆ ಶ್ರೀವೈಷ್ಣವರೆಲ್ಲರೂ ಅವರವರ ಮನೆಗಳಲ್ಲೂ, ದೇವಸ್ಥಾನಗಳಲ್ಲೂ, **ಶ್ರೀಮದ್ರಾಮಾನುಜರ** ಮೂರ್ತಿಯನ್ನು ಪ್ರತಿಷ್ಠಾಪಿಸಿ ಪೂಜಿಸುತ್ತಾ ಬಂದಿರುವರು.

ಲೋಕ ಕ್ಷೇಮಕ್ಕಾಗಿಯೇ ಅವತರಿಸಿ ಬಂದ ಶ್ರೀಮದ್ರಾಮಾನುಜರ ಕೀರ್ತಿಯನ್ನರಿತ ತಿರುವರಂಗತ್ತಮುದನಾರ್‌ರು ರಾಮಾನುಜಾಚಾರ್ಯರ ವಿಷಯವಾಗಿ ತಮ್ಮ ಹೃದಯದಲ್ಲಿ ಉತ್ಪನ್ನವಾದ ಅಲೌಕಿಕ ಭಗವತ್ ನಿರ್ಹೇತುಕ ಅನುಗ್ರಹ

ದಿಂದ ಅವರ ವಿಷಯವಾಗಿ ಒಂದುನೂರ‌ಎಂಟು ಪಾಶುರಗಳನ್ನು ದ್ರಾವಿಡ ಭಾಷೆಯಲ್ಲಿ ರಚಿಸಿದರು. ಇದಕ್ಕೆ **"ಇರಾಮಾನುಜ ನೂತ್ತಂದಾದಿ"** ಎಂದು ಹೆಸರು. ಅಂತಾದಿ ಕ್ರಮದಲ್ಲಿ ರಚಿಸಿರುವ ಈ ಗ್ರಂಥವು ದಿವ್ಯ ಪ್ರಬಂಧಗಳಲ್ಲಿ ಸೇರಿಸಿ ಅನುಸಂಧಾನ ಮಾಡಲ್ಪಡುವ ಚರಿತ್ರಾರ್ಹತೆಯನ್ನು ಪಡೆದಿರುವುದು.

ಈ ಗ್ರಂಥದಲ್ಲಿ ಎಲ್ಲಾ ಆಳ್ವಾರರುಗಳನ್ನು ಎಂದರೆ 8,9,10 ನೇ ಪಾಶುರಗಳಲ್ಲಿ ಪೊಯ್ಗೈ ಆಳ್ವಾರ್, ಪೂದತ್ತಾಳ್ವಾರ್ ಮತ್ತು ಪೇಯಾಳ್ವಾರ್ 12ನೇ ಪಾಶುರ ದಿಂದ 21ನೇ ಪಾಶುರದವರೆಗೆ ತಿರುಮಳಿಶೈ, ತಿರುಪ್ಪಾಣಿ ಆಳ್ವಾರ್ (ಮುನಿವಾಹನ) ತೊಂಡರಡಿಪ್ಪೊಡಿ, ಕುಲಶೇಖರ, ಪೆರಿಯಾಳ್ವಾರ್, ಆಂಡಾಳ್ (ಶೂಡಿ ಕುಡುತ್ತ ನಾಚ್ಚಿಯಾರ್), ತಿರುಮಂಗೈ, ಮಧುರಕವಿ, ನಮ್ಮಾಳ್ವಾರ್, ನಾಥಮುನಿ ಆಳವಂದಾರ್ ಮುಂತಾದವರನ್ನೂ ಅವರುಗಳು ಬರೆದ ಗ್ರಂಥಗಳನ್ನೂ ವಿವರಿಸಿ, ತಮ್ಮ ನೈಜ ಭಾವವನ್ನೂ, ಆಚಾರ್ಯರ ಹಿರಿಮೆಯನ್ನೂ, ವೇದಾಂತ ತತ್ವ ವಿಶಿಷ್ಟಾದ್ವೈತ ವಿಚಾರವನ್ನೂ ಅವರ ಅವತಾರ ವಿಶೇಷಗಳನ್ನೂ ಕೊನೆಗೆ **ಪರತತ್ವ ಶ್ರೀಮನ್ನಾರಾಯಣನೇ** ಎಂದು ತಿಳಿಸಿ ತಮ್ಮ ಜನ್ಮ ಸಾರ್ಥಕಪಡಿಸಿ ಕೊಂಡಿರುವರು. ಅರ್ಚರಾದಿ ಮಾರ್ಗವಾದ ಭಗವದ್ಗುಣಾನುಭವದೊಂದಿಗೆ ಆಚಾರ್ಯ ಗುಣಾನುಭವವನ್ನು ಮಾಡಬಹುದೆಂದು ಶಾಸ್ತ್ರ ಹೇಳುವುದರಿಂದ ಆಳ್ವಾರುಗಳ ನಾಲ್ಕು ಸಹಸ್ರ ಪ್ರಬಂಧಗಳೊಂದಿಗೆ ಈ ರಾಮಾನುಜ ನೂತ್ತಂದಾದಿಯನ್ನೂ ಸೇರಿಸಿ ಪಾರಾಯಣ ಮಾಡಲಾಣತಿಯಿದೆ.

"ಇರಾಮಾನುಶ ನೂತ್ತಂದಾದಿ" ಎಂಬ ದ್ರಾವಿಡ ಪ್ರಬಂಧ ಗ್ರಂಥವನ್ನು ದೇಶಭಾಷೆಯಲ್ಲಿ ಕನ್ನಡಕ್ಕೆ ಪರಿವರ್ತಿಸಿ ಪದಶಃ ಅರ್ಥ ತಾತ್ಪರ್ಯ ಇವುಗಳನ್ನು ಸುಲಭ ಶೈಲಿಯಲ್ಲಿ ಬರೆದು ಪ್ರತಿಯೊಬ್ಬ ಶ್ರೀವೈಷ್ಣವರೂ ಅನುಸಂಧಾನ ಮಾಡಿ ಇಹಪರ ಶ್ರೇಯೋಭಾಗಿಗಳಾಗುವಂತೆ ರಚಿಸಿ ಪ್ರಕಾಶಪಡಿಸುತ್ತಿರುವ **"ಶ್ರೀಮದ್ರಾಮಾನುಜ ನೂರಂತ್ಯಾದಿ"**ಯು ಶ್ರೀಮಾನ್ ಹಾರೋಹಳ್ಳಿ ತಿರುವೇಂಗಡ ಶರ್ಮ (ಪ್ರೊ|| ಹೆಚ್. ಪುಟ್ಟಸ್ವಾಮಿ) ರವರ ಲೇಖನಿಯಿಂದ ಮೂಡಿಬಂದ ಉನ್ನತ ಕೃತಿ. ಇವರು ಇಂತಹ ಅಮೂಲ್ಯ ಗ್ರಂಥಗಳನ್ನು ಅಧಿಕವಾಗಿ ರಚಿಸಿ ಲೋಕೋಪಕಾರಿಗಳಾಗಲು ಇವರಿಗೆ ಭಗವಂತನು ಇತೋಽಪ್ಯತಿಶಯ ಜ್ಞಾನ ಶಕ್ತಿಗಳನ್ನು ಕೊಟ್ಟು ಅದಕ್ಕೆ ಸಹಕಾರಿಯಾಗಿ ಆಯುರಾರೋಗ್ಯ ಐಶ್ವರ್ಯಾದಿಗಳುಂಟಾಗುವಂತೆ ಆಶಿಸಿ ಮಾಡುವ ಮಂಗಳಾಶಾಸನಗಳು.

ಮೇಲುಕೋಟೆ (ಯಾದವಾದ್ರಿ)
ಶ್ರೀಭಾವ ಸಂವತ್ಸರ ಚೈತ್ರ ಬಹುಳ
ಪಂಚಮಿ ಶುಕ್ರವಾರ
29–4–1994

ಶ್ರೀ ರಾಮಾನುಜ
ಶ್ರೀ ಯದುಗಿರಿ ಯತಿರಾಜ ಮಠಾಧೀಶ
ಅಸೂರಿ ಸಂಪತ್ಕುಮಾರ
ರಾಮಾನುಜ ಜೀಯರ್ ಸ್ವಾಮಿಗಳು



# ಶ್ರೀ ಬ್ರಹ್ಮತಂತ್ರ ಸ್ವತಂತ್ರ ಪರಕಾಲ ಸ್ವಾಮಿ ಮಠ

ಕೃಷ್ಣವಿಲಾಸ ರಸ್ತೆ, ದೇವರಾಜ ಮೊಹಲ್ಲಾ, ಮೈಸೂರು-24.

ಶ್ರೀ ಬ್ರಹ್ಮತಂತ್ರ ಪರಕಾಲ ಗುರು ಪರಂಪರಾಯೈ ನಮಃ
ಶ್ರೀಮಾನ್ ವೇಂಕಟನಾಥಾರ್ಯ ಕವಿತಾರ್ಕಿಕ ಕೇಸರೀ ।
ವೇದಾಂತಾಚಾರ್ಯ ವರ್ಯೋ ಮೇ ಸನ್ನಿಧತ್ತಾಂ ಸದಾಹೃದಿ ।
ಜ್ಞಾನಾನಂದಮಯಂ ದೇವಂ ನಿರ್ಮಲ ಸ್ಫಟಿಕಾಕೃತಿಂ ।
ಆಧಾರಂ ಸರ್ವವಿದ್ಯಾನಾಂ ಹಯಗ್ರೀವ ಮುಪಾಸ್ಮಹೇ ॥

## ಶ್ರೀ ಲಕ್ಷ್ಮೀ ಹಯಗ್ರೀವ ದಿವ್ಯ ಪಾದುಕಾ ಸೇವಕ ಶ್ರೀಮದಭಿನವ ವಾಗೀಶ ಬ್ರಹ್ಮತಂತ್ರ ಸ್ವತಂತ್ರ ಪರಕಾಲ ಮಹಾದೇಶಿಕರ ಅನುಗ್ರಹ ಸಂದೇಶ

ಇರಾಮಾನುಶ ನೂತ್ತಂದಾದಿ ಯು ಪ್ರಪನ್ನ ಗಾಯತ್ರಿ ಎಂದು ಭಗವದ್ಭಾಗವತ ಪರಂಪರೆಯಿಂದ ಲೋಕದಲ್ಲಿ ಪ್ರಸಿದ್ಧವಾಗಿದೆ. ಇದರಲ್ಲಿ ಭಗವದ್ರಾಮಾನುಜರ ದಿವ್ಯ ವೈಭವವು ನಾನಾ ಮುಖಗಳಿಂದ ಪ್ರಕಾಶಿತ ವಾಗಿದೆ. ಆಚಾರ್ಯ ವೈಭವದ ಅನುಸಂಧಾನವು ಚೇತನರ ಉದ್ಧಾರಕ್ಕೆ ಬುನಾದಿ ಯಾಗಿದೆ. ಆಚಾರ್ಯರಲ್ಲಿ ಭಗವತ್ಪ್ರತಿಪತ್ತಿಯೂ ಪ್ರಪತ್ತಿಯೂ ಅತ್ಯಾವಶ್ಯಕ. ಕಾರಣ,

**ಯಸ್ಯದೇವೇ ಪರಾಭಕ್ತಿಃ ಯಥಾದೇವೇ ತಥಾಗುರೌ ।**
**ತಸ್ಯೈತೇ ಹ್ಯಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥**

ಎಂದು ಶ್ರುತಿ ಮಾತೆಯು ಅಪ್ಪಣೆ ಕೊಡುವಂತೆ ಭಗವಂತನಲ್ಲಿಡುವಂತೆ ಆಚಾರ್ಯ ರಲ್ಲಿಯೂ ಭಕ್ತಿನಿಷ್ಠೆಯು ಅತ್ಯಗತ್ಯ ಮತ್ತು

**ಹರೌರುಷ್ಟೇ ಗುರುಸ್ತ್ರಾತಾ ಗುರೌರುಷ್ಟೇ ನ ಕಶ್ಚನ**

ಎಂದು ಹರಿಯ ನಿಗ್ರಹವನ್ನು ಗುರುವು ಹೋಗಲಾಡಿಸುತ್ತಾನೆ. ಆದರೆ ಗುರುವಿನ ನಿಗ್ರಹವನ್ನು ಹರಿಯೂ ಹೋಗಲಾಡಿಸಲಸಮರ್ಥನಾಗಿರುತ್ತಾನೆ. ಅಂತೆಯೇ

**ಆಚಿನೋತಿ ಹಿ ಶಾಸ್ತ್ರಾಣಿ ಆಚಾರೇ ಸ್ಥಾಪಯತ್ಯಪಿ ।**
**ಸ್ವಯಮಾಚರತೇ ಯಸ್ಮಾತಸ್ಮಾದಾಚಾರ್ಯ ಉಚ್ಯತೇ ॥**

ಎಂದು ಶಾಸ್ತ್ರಗಳನ್ನು ತಾನು ಅನುಷ್ಠಾನದಲ್ಲಿಟ್ಟುಕೊಂಡು, ಲೋಕದಲ್ಲಿಯೂ ಅನುಷ್ಠಾನದಲ್ಲಿ ಅಳವಡಿಸುವುದರಿಂದ ಆಚಾರ್ಯನು ತ್ರಿವಿಕ್ರಮನಾಗಿ ಬೆಳಗುತ್ತಾನೆ. ಮತ್ತು,

**" ಆಚಾರ್ಯಃ ಪೂರ್ವ ರೂಪಮ್ "**
**" ಆಚಾರ್ಯ ದೇವೋಭವ "**
**" ಆಚಾರ್ಯಾಧಿಗತಾ ವಿದ್ಯಾಸಾಧಿಷ್ಠ ಭವತಿ "**

ಎಂಬ ಶ್ರುತಿಗಳು ಅವನ ಸ್ವರೂಪವನ್ನು ಪ್ರಕಾಶಪಡಿಸಿವೆ. ಆಚಾರ್ಯನು (ಗುರುವು) ಹೃದ್ಗತ ಅಜ್ಞಾನಾಂಧಕಾರವನ್ನು ನಿರ್ಮೂಲಗೊಳಿಸಿ, ಜ್ಞಾನ ಜ್ಯೋತಿಯನ್ನು ಬೆಳಗಿಸುತ್ತಾನೆ. ಅವನು ಸಿದ್ಧನೂ, ಸತ್ಸಂಪ್ರದಾಯ ಪ್ರವರ್ತಕನೂ, ಸ್ಥಿರಧಿಯನೂ, ನಿರ್ದುಷ್ಟನೂ, ಬ್ರಹ್ಮನಿಷ್ಠನೂ ಆಗಿರುವುದರಿಂದ ಭಗವಂತನಂತೆ ಸರ್ವದಾ ಉಪಾಸ್ಯನಾಗಿರುತ್ತಾನೆ. ಆದ್ದರಿಂದ ಅವನ ವೈಭವದ ಗುಣಗಾನದ ಹಿನ್ನೆಲೆಯಲ್ಲಿ " ಇರಾಮಾನುಶ ನೂತ್ತಂದಾದಿ " ಯನ್ನು ಹಿಂದೆ ಮೈಸೂರು ಶ್ರೀಮದಾಂಡವನ್ ಅವರು ತಮ್ಮ ಪೂರ್ವಾಶ್ರಮದಲ್ಲಿ ಶ್ರೀ ಉ|| ವೇ|| ವಿದ್ವಾನ್ ಹೆಚ್. ಗೋಪಾಲಾಚಾರ್ಯ ಎಂಬ ಹೆಸರಿನಿಂದ ಕನ್ನಡಕ್ಕೆ ಅನುವಾದಿಸಿದ್ದರೂ ಅದು ಈಗ ಅಲಭ್ಯವಾಗಿರುವಾಗ, ಈ ದಿವ್ಯ ಪ್ರಬಂಧಕ್ಕೆ ಪ್ರೊ|| ಹಾರೋಹಳ್ಳಿ ತಿರುವೇಂಗಡ ಶರ್ಮಾ (ಹೆಚ್. ಪುಟ್ಟಸ್ವಾಮಿ) ಅವರ ಕನ್ನಡ ಅನುವಾದವು ಅತ್ಯಂತ ಹೃದಯಂಗಮವಾಗಿದೆ. ಇವರ ಲೇಖನಿಯಿಂದ ಇಂತಹ ಅನೇಕ ಅಮೂಲ್ಯ ಕೃತಿಗಳು ಹೊರಹೊಮ್ಮಿ ಭಗವದ್ಭಾಗವತ ಕೈಂಕರ್ಯ ಪರರಾಗಲುಕಾರಣರಾಗುವ ಇವರಿಗೆ ಶ್ರೀ ಲಕ್ಷ್ಮೀಹಯಗ್ರೀವ ಭಗವಂತನಲ್ಲಿ ಅನುಗ್ರಹಕ್ಕಾಗಿ ಪ್ರಾರ್ಥಿಸುವೆವು.

ಇದರ ಅಧ್ಯಯನದಿಂದ ಭಕ್ತರು ಶ್ರೀ ಭಗವದ್ರಾಮಾನುಜರ ದಿವ್ಯಗುಣಗಾನವನ್ನು ಆಸ್ವಾದನೆ ಮಾಡಲು ಅಹಮಹಮಿಕಯಾ ಅಗ್ರೇಸರರಾಗುತ್ತಾರೆ ಎಂಬುದರಲ್ಲಿ ಸಂಶಯವಿಲ್ಲ.

**ಇತಿ ಶ್ರೀ ನಾರಾಯಣ ಸ್ಮೃತಯಃ**

ವೇದಾಂತ ವಿದ್ವಾನ್
**ಡಾ|| ಎನ್. ಎಸ್. ಅನಂತರಂಗಾಚಾರ್ಯ**
ಗೌರವ ಕುಲಸಚಿವ, ಭಾರತೀಯ ವಿದ್ಯಾಭವನ
" ಶ್ರೀನಿಕೇತನ " ವಿಜಯನಗರ, ಬೆಂಗಳೂರು-40.

ಬೆಂಗಳೂರು
6-5-1994

# ಮುನ್ನುಡಿ

ಭಗವಂತನ ನಿರ್ಹೇತುಕ ಕಟಾಕ್ಷದಿಂದ ಜನ್ಮದಿಂದಲೇ ದಿವ್ಯಜ್ಞಾನ ಸಂಪನ್ನರಾದ ಆಳ್ವಾರರುಗಳು ಹಾಡಿದ ನಾಲಾಯಿರ ದಿವ್ಯಪ್ರಬಂಧಗಳ ಶ್ರೇಣಿಯಲ್ಲಿ ತಿರುವರುಗತ್ತ ಅಮುದನಾರ್ ಅವರು ಹಾಡಿದ " ಇರಾಮಾನುಶ ನೂತ್ತಂದಾದಿ " ಪ್ರಬಂಧವೂ ಸೇರುತ್ತದೆ. ಈ ಪ್ರಬಂಧಕ್ಕೆ ವಿಶಿಷ್ಟವಾದ ಸ್ಥಾನವಿರುವುದರಿಂದ ಇದರ ಅನುಸಂಧಾನವಾಗದೆ ದಿವ್ಯಪ್ರಬಂಧಗಳ ಪಾರಾಯಣವು ಪೂರ್ಣವಾಗುವುದಿಲ್ಲ. ಇದನ್ನು ನಾಲ್ಕು ಸಾವಿರ ಪ್ರಬಂಧಗಳಲ್ಲಿ ಸೇರಿಸಿಯೂ ಅನುಸಂಧಾನ ಮಾಡುವುದುಂಟು. ಭಗವದ್ರಾಮಾನುಜರಿಗೂ ನಾಲಾಯಿರ ದಿವ್ಯಪ್ರಬಂಧಗಳಿಗೂ ಇರುವ ನಿಕಟವಾದ ಸಂಬಂಧ ಅಂಥದು. ಪರಾಶರಭಟ್ಟರು ಅನುಗ್ರಹಿಸಿರುವ ತನಿಯನ್‌ನಲ್ಲಿ " ಭಕ್ತಾಂಘ್ರಿರೇಣು ಪರಕಾಲ ಯತೀಂದ್ರ ಮಿಶ್ರಾನ್ " ಎಂದು ಆಳ್ವಾರರ ಗೋಷ್ಠಿಗೆ ರಾಮಾನುಜರನ್ನು ಸೇರಿಸಿರುವುದನ್ನು ಕಾಣಬಹುದು. " ಮುತ್ತಿತರುಂ ಯತಿರಾಶರ್ ಪೊನ್ನಡಿಕ್ಕೇ ಮೊಳಿಂದ ಅಮುದರ್ ಪಾಡಲ್ ನೂರುಂಎಟ್ರು " ಎಂದು ಪ್ರಬಂಧ ಸಾರದಲ್ಲಿ ಶ್ರೀಮನ್ನಿಗಮಾಂತ ದೇಶಿಕರು ನಿರೂಪಿಸಿರುತ್ತಾರೆ.

ಮಧುರಕವಿ ಆಳ್ವಾರರು ಅದ್ಭುತವಾದ ತಮ್ಮ ಆಚಾರ್ಯ ನಿಷ್ಠೆಯನ್ನು ತಮ್ಮ " ಕಣ್ಣಿನುಣ್ ಶಿರುತ್ತಾಂಬು " ಪ್ರಬಂಧದಲ್ಲಿ ಅಭಿವ್ಯಕ್ತಿಗೊಳಿಸಿದರು. ಅಲ್ಲಿ " ಅವನ್ ಪೊನ್ನಡಿ ಮೇವಿನೇನ್ ತೇವು ಮತ್ತರಿಯೇನ್ " ಎಂದು ದೃಢವಾದ ಅಧ್ಯವಸಾಯವನ್ನು ಹೊಂದಿದರು. ಅದೇ ರೀತಿಯಲ್ಲಿ ಅಮುದನಾರ್ ಅವರು ಭಗವದ್ರಾಮಾನುಜರಲ್ಲಿ ತಮ್ಮ ಅನುಪಮವಾದ ಭಕ್ತಿಯನ್ನು ಈ ದಿವ್ಯಪ್ರಬಂಧದಲ್ಲಿ ಹೊರ ಹೊಮ್ಮಿಸಿದ್ದಾರೆ. ಮಧುರಕವಿ ಆಳ್ವಾರ್ ಅವರ ದಿವ್ಯಪ್ರಬಂಧವನ್ನು ತಿರುವಾಯ್ಮೊಳಿ ಪ್ರಬಂಧ ಪಾರಾಯಣದ ಮೊದಲಿನಲ್ಲಿ ಮತ್ತು ಕೊನೆಯಲ್ಲಿಯೂ ಪಠಿಸುತ್ತಾರೆ. ಅದೇ ರೀತಿಯಲ್ಲಿ ಅಮುದನಾರ್ ಅವರ " ಇರಾಮಾನುಶ ನೂತ್ತಂದಾದಿ " ಪ್ರಬಂಧವು ಪ್ರಪನ್ನ ಗಾಯತ್ರಿ ಎಂದು ವಿಖ್ಯಾತವಾಗಿದೆ. ಪ್ರತಿನಿತ್ಯವೂ ಇದರ ಅನುಸಂಧಾನ ಆಗಲೇಬೇಕು.

ಭಗವದ್ರಾಮಾನುಜರು ಈ ದರ್ಶನವನ್ನು ಸ್ಥಾಪಿಸುವುದರಲ್ಲಿ ಆಳ್ವಾರರುಗಳಿಂದ ಪ್ರಭಾವಿತರಾಗಿದ್ದಾರೆಂಬುದನ್ನು ಈ ಪ್ರಬಂಧದಿಂದ ಸ್ಪಷ್ಟವಾಗಿ ಅರಿಯಬಹುದು. ರಾಮಾನುಜರು ಶ್ರುತ್ಯರ್ಥಗಳನ್ನು ನಿರ್ಣಯಿಸುವಾಗ ಆಳ್ವಾರರುಗಳ ಶ್ರೀ ಸೂಕ್ತಿ

ಗಳು ಸ್ಫೂರ್ತಿ ನೀಡಿದವು. ವೇದಾಂತ ಗ್ರಂಥಗಳಲ್ಲಿ ರಾಮಾನುಜರು ದ್ರಾವಿಡ ಪ್ರಬಂಧಗಳ ಪ್ರಮಾಣಗಳನ್ನು ಉಲ್ಲೇಖಿಸಿಲ್ಲವೆಂಬ ಕಾರಣದಿಂದ, ದಿವ್ಯಪ್ರಬಂಧಗಳ ಪ್ರಭಾವವನ್ನು ತಳ್ಳಿ ಹಾಕುವಂತಿಲ್ಲ.

ಅಮುದನಾರ್ ಅವರು ಈ ದಿವ್ಯಪ್ರಬಂಧದಲ್ಲಿ ರಾಮಾನುಜರನ್ನು ಪ್ರತ್ಯಕ್ಷವಾಗಿ ಕೊಂಡಾಡುತ್ತಿದ್ದರೂ, ಪರೋಕ್ಷವಾಗಿ ಆಳ್ವಾರರುಗಳನ್ನೂ ಪ್ರಾಚೀನಾಚಾರ್ಯರುಗಳನ್ನೂ ಸೇರಿಸಿ ಸ್ತುತಿಸಿರುತ್ತಾರೆ. "ಅಂತಹ ಮಹಿಮೆಯುಳ್ಳ ಆಳ್ವಾರರುಗಳನ್ನೂ ಹೃದಯದಲ್ಲಿಟ್ಟುಕೊಂಡಿರುವ ರಾಮಾನುಜರು ನನಗೆ ಪರಮಗತಿ" ಎನ್ನುತ್ತಾರೆ. ಆಳ್ವಾರರುಗಳ ಮತ್ತು ಪೂರ್ವಾಚಾರ್ಯರುಗಳ ಸ್ತುತಿ ರಾಮಾನುಜರಿಗೂ ಇಷ್ಟವಾದುದೇ ಹೌದು. ಅವರೊಡನೆ ಸೇರಿಸಿ ತಮ್ಮನ್ನು ಕೊಂಡಾಡಿರುವುದರಿಂದ ಇದನ್ನು ಅವರೂ ಒಪ್ಪಿರುತ್ತಾರೆ.

"ತಮಿಳ್ ತಲೈವನ್ ಪೊನ್ನಡಿಪೋತ್ತುಂ ಇರಾಮಾನುಶನ್ (10)"

"ಮಾರನ್ ಪಣಿತ್ತ ಮಱೈ ಉಣರ್‌ನ್ದೋನೈ (46)"

"ಮಾರನ್ ವಿಳಂಗಿಯಶೀರ್ ನೆರಿ ತರುಮನ್ ಶೆಂದಮಿಳಾರಣನೇ ಎನ್ರು
ಇನ್ನೀಣಿಲತ್ತೋರ್ ಅರಿದರ ನಿನ್ರ ಇರಾಮಾನುಶನ್ (19)"

"ನಾದಮುನಿಯೈ ನೆಂಜಾಲ್ ವಾರಿಪ್ಪರುಹುಂ ಇರಾಮಾನುಶನ್ (20)"

"ಅನ್ರು ಎರಿತ್ತ ತಿರುವಿಳಕ್ಕೈ ತನ್ ತಿರುವುಳ್ಳತ್ತೇ ಇರುತ್ತುಂ ಪರಮನ್ (8)"

"ಪಾಣ್‌ಪೆರುಮಾಳ್ ಶರಣಾಮ್ ಪದುಮತ್ತಾರ್ ಇಯಲ್‌ಶೆನ್ನಿ
ಇರಾಮಾನುಶನ್ (11)"

"ಮಾಲೈಯೈ ಶೂಡಿಕೊಡುತ್ತವಳ್ ತೊಲ್ಲರುಳಾಲ್ ವಾಳ್ ಹಿನ್ರ
ವಳ್ಳಲ್ (16)"

ಹೀಗೆ ಈ ದಿವ್ಯಪ್ರಬಂಧದಲ್ಲಿ ಮಹಾನುಭಾವರಾದ ಆಳ್ವಾರರುಗಳ ಗಾಢವಾದ ಅನುಸಂಧಾನಗರ್ಭಿತವಾದ ರಾಮಾನುಜರ ಸ್ತುತಿ ಬೆಳಗಿದೆ. "ಅತ್ತಿಯೂರರ್ ಕಳಲಿಣೈಕ್ಕೀಳ್ ಪೂಂಡ ಅನ್ಬಾಳನ್" ಆದ ರಾಮಾನುಜರನ್ನು ಆಶ್ರಯಿಸಿ ನಾವು ಧನ್ಯರಾದೆವು ಎನ್ನುತ್ತಾರೆ ಅಮುದನಾರ್ ಅವರು.

"ಭಗವದ್ರಾಮಾನುಜರನ್ನಾಶ್ರಯಿಸಿರುವವರ ಶ್ರೀಪಾದಗಳನ್ನು ಬಿಟ್ಟು ನನಗೆ ಬೇರೆ ಆಶ್ರಯವಿಲ್ಲ (85)" ಎಂದು ಭಾಗವತ ನಿಷ್ಠೆಯನ್ನು ತೋರಿದ್ದಾರೆ.

"ರಾಮಾನುಜರನ್ನು ಆಶ್ರಯಿಸಿದೊಡನೆ ನಮ್ಮ ಪಾಪಗಳನ್ನೆಲ್ಲಾ ಕಳೆದುಕೊಂಡೆವು (35)" ಎನ್ನುತ್ತಾರೆ.

"ಶ್ರೀ ಮದ್ರಾಮಾಯಣವೆಂಬ ಭಕ್ತಿ ಸಮುದ್ರದಲ್ಲಿ ನಿತ್ಯವಾಸ ಮಾಡುವ ದೇವಾಲಯದೋಪಾದಿ ರಾಮಾನುಜರು (37)". ರಾಮಾನುಜರು ಪರಮ ಕರುಣಾಳುಗಳು, ಅವರು ಉಂಟುಮಾಡುವ ಕ್ಷೇಮಗಳನ್ನು ಯಾರೂ ಮಾಡಲಾರರು, ರಾಮಾನುಜರು ಅವತರಿಸಿದ ಮೇಲೆ ಲೋಕದ ಜನ ಒಳ್ಳೆಯ ಜ್ಞಾನ ಹೊಂದಿ ಶ್ರೀಮನ್ನಾರಾಯಣನಿಗೆ ದಾಸಭೂತರಾದರು (41). ರಾಮಾನುಜರು ಸಾಧಿಸಿದ ಮಹತ್ಕಾರ್ಯ, ಭಕ್ತಿ ಮಾರ್ಗದ ಪ್ರತಿಷ್ಠಾಪನೆ. ಶ್ರೀಮನ್ನಾರಾಯಣನೇ ಪರಮ ತತ್ವವೆಂದು, ಅವನ ನಿತ್ಯ ಕೈಂಕರ್ಯವನ್ನು ಪಡೆಯುವುದೇ ಪರಮ ಪುರುಷಾರ್ಥವೆಂದು ಅದಕ್ಕೆ ಉಪಾಯ ಎಂದರೆ ಅವನಲ್ಲಿ ಶರಣು ಹೋಗುವುದೇ ಎಂದೂ, ಅವರು ಸ್ಥಾಪಿಸಿದರು. ಸಂಸ್ಕೃತ ವೇದ ಮತ್ತು ದ್ರಾವಿಡ ವೇದ ಎಂಬ ಇವೆರಡರ ಹಿರಿಮೆಯನ್ನೂ ಅವರು ಎತ್ತಿ ಹಿಡಿದರು. ಅಮುದನಾರ್ ಅವರು ಈ ಉಭಯ ವೇದಾಂತದ ಸಮನ್ವಯವನ್ನು ಸಾಧಿಸಿದಂತಹ ಶ್ರೀಮದ್ರಾಮಾನುಜರನ್ನು ಕೊಂಡಾಡಿರುತ್ತಾರೆ.

ಸೌಶೀಲ್ಯಪೂರ್ಣರಾದ ರಾಮಾನುಜರ ತೇಜಸ್ಸಿನಿಂದ ದುರ್ಮತಗಳು ಅಳಿಸಿ ಹೋದುವು. ಶ್ರಿಯಃ ಪತಿಯನ್ನು ಪರಮ ತತ್ವವೆಂದು ಪ್ರತಿಪಾದಿಸುವ **ವೇದಗಳು** –"ಇನ್ನು ನಮಗೆ ಕೊರೆಯಿಲ್ಲ"–ಎಂದು ಉದ್ದೀಪ್ತವಾದವು. ತಿರುನಹರಿಯಲ್ಲಿ ಅವತರಿಸಿದ ಪರಮೋದಾರರಾದ ನಮ್ಮಾಳ್ವಾರ್ ಅವರು, ಸರ್ವರಿಗೂ ಅಧಿಕರಿಸುವುದಕ್ಕಾಗುವಂತೆ ಅನುಗ್ರಹಿಸಿದ **ದ್ರಾವಿಡ ವೇದವು** ಯಾವ ಸಂಕೋಚವೂ ಇಲ್ಲದೆ ಉಜ್ವಲವಾಗಿ ಬೆಳಗಿದವು (54). ಹೀಗೆ ತಿರುವರಂಗತ್ತಮುದನಾರ್ ಅವರ ಈ ದಿವ್ಯ ಪ್ರಬಂಧವು ಈ ದರ್ಶನದ ವೈಭವವನ್ನೂ, ಭಗವದ್ರಾಮಾನುಜರ ಪರಮೋನ್ನತವಾದ ಹಿರಿಮೆಯನ್ನೂ ಪ್ರಕಾಶಪಡಿಸುತ್ತದೆ.

ಇಂತಹ ಉತ್ತಮ ಕೃತಿಯ ಕನ್ನಡಾನುವಾದವನ್ನು ಸಂಪ್ರದಾಯಬದ್ಧವಾಗಿ ಬಹಳ ಸರಳವಾದ ಭಾಷೆಯಲ್ಲಿ ರಚಿಸಿ ಪ್ರೊ|| ಹಾರೋಹಳ್ಳಿ ತಿರುವೇಂಗಡ ಶರ್ಮರವರು ಪರಮೋಪಕಾರ ಮಾಡಿದ್ದಾರೆ – ಮೂಲ ಪಾಶುರಗಳು, ಅವುಗಳಿಗೆ ಪ್ರತಿ ಪದಾರ್ಥ ಮತ್ತು ಸಂಗ್ರಹವಾದ ವಿವರಣೆಗಳನ್ನು ಕೊಟ್ಟು ಪಾಶುರಗಳ ಅರ್ಥಾನುಸಂಧಾನಕ್ಕೆ ಅವಕಾಶ ಮಾಡಿಕೊಟ್ಟಿದ್ದಾರೆ. ಈ ಮಹನೀಯರು ದಿವ್ಯಪ್ರಬಂಧಗಳನ್ನು ಆಳವಾಗಿ ಅಧ್ಯಯನ ಮಾಡಿ ಈಗಾಗಲೇ ಅನೇಕ ಕೃತಿಗಳನ್ನು ಪ್ರಕಾಶಪಡಿಸಿದ್ದಾರೆ. ಮಾನ್ಯ ಲೇಖಕರ ಈ ಸಾರಸ್ವತ ಸೇವೆ ಶ್ಲಾಘನೀಯವಾದುದು. ತಮಿಳು ಭಾಷೆಯ ಪರಿಚಯವಿಲ್ಲದ ಕನ್ನಡಿಗರಿಗೆ ಇದರಿಂದ ಬಹಳ ಉಪಕಾರವಾಗಿದೆ. ಈ ಉತ್ತಮವಾದ ಕೃತಿಯನ್ನು ಜನ ಅನುಸಂಧಾನ ಮಾಡಿ ಶ್ರೀಮದಾಚಾರ್ಯರ ಅನುಗ್ರಹಕ್ಕೆ ಪಾತ್ರರಾಗುವಂತೆ ಆಗಲೆಂದು, ಇದೇ ಲೇಖಕರಿಂದ ಇಂತಹ ಅನೇಕ ಕೃತಿಗಳು ಹೊರಹೊಮ್ಮಲೆಂದು ಆಶಿಸುತ್ತಾ ಭಗವಂತನು ಶ್ರೀಯುತರಿಗೆ ಎಲ್ಲಾ ಒಳ್ಳೆಯದನ್ನು ನೀಡಲೆಂದು ಬೇಡುವೆ.

**ಎನ್. ಎಸ್. ಅನಂತರಂಗಾಚಾರ್ಯ**

ಆಗಮ ಸಾಹಿತ್ಯಭೂಷಣ, ಪಾಂಚರಾತ್ರ ಆಗಮ ವಿದ್ವಾನ್
ಆಗಮ ಚಕ್ರವರ್ತಿ, ರಾಮಾನುಜ ಆಜ್ಞಾಪಾಲಕ, ಅಭಿನವ ರಾಮಾನುಜ

**ಸ ವ್ಯ ಸಾ ಚಿ**

ಆಸ್ಥಾನ ವಿದ್ವಾನ್ ಶಿವ ವಿಷ್ಣು ದೇವಾಲಯ — ಅನಂತ ನಿಲಯ
ಅಮೆರಿಕಾ ಸಂಯುಕ್ತ ಸಂಸ್ಥಾನಗಳು — ಹಿರೇಮಗಳೂರು, ಚಿಕ್ಕಮಗಳೂರು

## ನನ್ನುಡಿ – ಅಭಿನಂದನೆಗಳು

ವೇದ ಓದದ ಬ್ರಾಹ್ಮಣನ ಬಾಳು ವ್ಯರ್ಥ ಅಂದಹಾಗೆ "ಇರಾಮಾನುಶ ನೂತ್ತಂದಾದಿ" ದಿವ್ಯ ಪ್ರಬಂಧವನ್ನು ಹಾಡದ ಬಾಯಿ, ಆಚಾರ್ಯ ನಿಷ್ಠೆಯಿಲ್ಲದವನ ಜನ್ಮ ವ್ಯರ್ಥ. ಇಂತಹ ಅದ್ಭುತ ಕೃತಿಯು ಇದು.

ಇರಾಮಾನುಶ ನೂತ್ತಂದಾದಿಯ ನೂರೆಂಟು ಪಾಶುರಗಳ ಅನುಸಂಧಾನವು ಅಷ್ಟೋತ್ತರ ಶತ ಆಚಾರ್ಯ ಸೇವೆಗೆ ಸಮಾನವಾದುದು. ಆಚಾರ್ಯಗುಣ ಸಮುಚ್ಚಯದ ಆಸೀಮ ಕೃತಿ ಇದು. ಇದರಲ್ಲಿ ಪ್ರಪನ್ನರಿಗೆ, ಮುಮುಕ್ಷುಗಳಿಗೆ, ಮೋಕ್ಷಾರ್ಥಿಗಳಿಗೆ ಅತ್ಯಂತ ಸುಲಭಮಾರ್ಗವಾದ ಶರಣಾಗತಿ ತತ್ವವು ಪ್ರತಿಪಾದಿತವಾಗಿದೆ.

ವೈಕುಂಠ, ತಿರುಪತಿ, ತಿರುಮಾಲಿರುಂಶೋಲೈ ಇತ್ಯಾದಿ ದಿವ್ಯದೇಶಗಳು ಭಗವಂತನ ವಾಸಸ್ಥಾನಗಳೆಂದು ತಿಳಿದವರು ಹೇಳುವರು. ಆದರೆ ಆ ದಿವ್ಯ ಸ್ಥಾನಗಳೊಡನೆ ಕೂಡಿ, ರಾಮಾನುಜಾಚಾರ್ಯರ ಹೃದಯದಲ್ಲೇ ಭಗವಂತನು ವಾಸ ಮಾಡುವ ಇಂತಹ ರಾಮಾನುಜಾಚಾರ್ಯರು ನನ್ನ ಹೃದಯದಲ್ಲೇ ನೆಲೆಗೊಂಡಿರುವರು (106) ಎಂದು ಅಮುದನಾರ್ ಹಾಡಿದ್ದಾರೆ.

ಇಂತಹ ಅದ್ಭುತವಾದ ದ್ರಾವಿಡ ದಿವ್ಯ ಪ್ರಬಂಧವನ್ನು ಕರ್ನಾಟಕ ಭಾಷೆಗೆ ಪರಿಚಯಿಸಿದ ಕೀರ್ತಿ ಉ|| ವೇ|| ಪ್ರ|| ಶ್ರೀ ಎಂ. ಸಿ. ವರದಾಚಾರ್ಯಸ್ವಾಮಿಯವರಿಗೆ ಸಲ್ಲಬೇಕು. ಶ್ರೀಯುತರು 1959ರಲ್ಲಿ ಮೂಲ, ಅರ್ಥ, ತಾತ್ಪರ್ಯ ಸಹಿತ ಕನ್ನಡಕ್ಕೆ ತಂದರು. ಅದು ಈಗ ಅಲಭ್ಯವಾಗಿದೆ. ಮೇಲಾಗಿ ಅದು ಪ್ರಕಟವಾಗಿರುವುದು ಎಷ್ಟೋ ಜನರಿಗೆ ತಿಳಿಯದು. ಈ ಒಂದು ಕೊರತೆಯನ್ನು ಪ್ರೊ|| ಹಾರೋಹಳ್ಳಿ ತಿರುವೇಂಗಡ ಶರ್ಮಾ ಅವರು ತುಂಬಿಕೊಟ್ಟಿದ್ದಾರೆ. ಪ್ರೊ|| ಹಾರೋಹಳ್ಳಿಯವರು ನಿವೃತ್ತ ಭೂವಿಜ್ಞಾನಿ. ವೃತ್ತಿಯಲ್ಲಿ ಅಧ್ಯಾಪಕರಾದರೂ ಪ್ರವೃತ್ತಿಯಲ್ಲಿ ಉತ್ತಮ ಲೇಖಕರು. ಅವರ ಪ್ರೌಢ ಗ್ರಂಥ "**ಶ್ರೀ ಶಠಜಿದ್ದರ್ಶನ ದರ್ಪಣ**", ಇದರಲ್ಲಿ ಶ್ರೀವೈಷ್ಣವ – ಶಾಸ್ತ್ರೀಯ ಶಾಸ್ತ್ರಾದ ಧರ್ಮಗಳ ವಿಚಾರವಿದೆ, ಆಳ್ವಾರ್‌ಗಳ ಪರಿಚಯವಿದೆ, ಆಚಾರ ವಿಚಾರಗಳ ಪ್ರಸ್ತಾವನೆ ಇದೆ. ರಾಮಾನುಜ ಪಂಥದವರೆಲ್ಲರ

ಮನೆಯಲ್ಲಿ ಇರಲೇಬೇಕಾದ ಅಮೂಲ್ಯ ಕೃತಿ. ಇದಲ್ಲದೆ ಶ್ರೀ ವೈಷ್ಣವ ಸಂಪ್ರದಾಯದ ಅನೇಕ ಕೃತಿಗಳನ್ನು ರಚಿಸಿ ಪ್ರಕಟಿಸಿರುವ ಪಳಗಿದ ಕೈ. ಬರವಣಿಗೆ ಸ್ಪಷ್ಟ, ಶೈಲಿ ಆಕರ್ಷಕ ಹಾಗೆಯೇ ಗಂಭೀರ. ಮೂಲಕ್ಕೆ ಲೋಪ ಬಾರದಂತೆ ಅರ್ಥೈಸುವ ಹಿರಿಮೆ ಇವರದು. ಇದೆಲ್ಲದರ ಕುರುಹು ಈ ಗ್ರಂಥ "**ಶ್ರೀಮದ್ರಾಮಾನುಜ ನೂರಂತ್ಯಾದಿ**". ಶ್ರೀಯುತರ ಶ್ರಮ, ಆಸಕ್ತಿ, ಸೇವಾಮನೋಭಾವ, ರಾಮಾನುಜ ಪಂಥದವರ ಬಗ್ಗೆ ಕಳಕಳಿ – ಇದೆಲ್ಲಕ್ಕೆ ಈ ಗ್ರಂಥವೇ ಸಾಕ್ಷಿ! ಇಂತಹ ಹತ್ತಾರು ಕೃತಿಗಳು ಶ್ರೀ ಹಾರೋಹಳ್ಳಿಯವರಿಂದ ಬರಲಿ. ಅವರ ಕೃತಿಯಾದ ಶ್ರೀಮದ್ರಾಮಾನುಜ ನೂರಂತ್ಯಾದಿಯು ಮನೆಮನೆಗಳಲ್ಲಿ ಅದರಲ್ಲೂ ವಿಶಿಷ್ಟಾದ್ವೈತಿಗಳ ಕೈ ಸೇರಲಿ ಎಂದು ನನ್ನ ಆರಾಧ್ಯ ದೈವವಾದ ಶ್ರೀ ಭಾರ್ಗವಪುರಿ ಕಲ್ಯಾಣ ರಾಮಚಂದ್ರಸ್ವಾಮಿಯವರ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕ ಪ್ರಾರ್ಥಿಸುವೆ.

**ರಾಮಾನುಜಾರ್ಯ ದಿವ್ಯಾಜ್ಞಾಂ ವರ್ಧತಾಂ ಅಭಿವರ್ಧತಾಂ**

ಅಡಿಯೇನ್
**ಸವ್ಯಸಾಚಿ ದಾಸನ್**

**ಹೆಚ್. ಜೆ. ರಾಮಯ್ಯಂಗಾರ್**
(ನಿವೃತ್ತ ವಿಷಯ ತನಿಖಾಧಿಕಾರಿ)
117/5ಎ, ನಾಗರಾಜ ವಿಸ್ತರಣೆ
ಬಸವನಗುಡಿ ಬೀದಿ ಅಡ್ಡ ರಸ್ತೆ
ಬೆಂಗಳೂರು–19.

ಬೆಂಗಳೂರು
8–4–1994

**ಶುಭ ಕಾಮನೆಗಳು**

ಕೂರೇಶರ ಶಿಷ್ಯರಾಗಿ, ತಿರುವರಂಗತ್ತ ಮುದನಾರ್ ಅವರು ಆಚಾರ್ಯ ರಾಮಾನುಜರನ್ನು ಕುರಿತು ರಚಿಸಿದ "ಇರಾಮಾನುಶ ನೂತ್ತಂದಾದಿ" ಯು ದಿವ್ಯ ಪ್ರಬಂಧಗಳಲ್ಲಿ ಸೇರಿ ಪ್ರಪನ್ನ ಗಾಯತ್ರಿ ಎಂಬ ಹೆಸರಿನಿಂದ ಪಾರಾಯಣ ಮಾಡಲ್ಪಡುತ್ತಿದೆ. ತಮಿಳು ಭಾಷೆಯಲ್ಲಿ ಇರುವ ಈ ಸ್ತೋತ್ರಕ್ಕೆ ಕನ್ನಡದಲ್ಲಿ ಪ್ರತಿಪದಾರ್ಥ ತಾತ್ಪರ್ಯಗಳನ್ನು ಬರೆದು ಪ್ರಕಟಿಸಿರುವ ಪ್ರೊ|| ಹಾರೋಹಳ್ಳಿ ತಿರುವೇಂಗಡ ಶರ್ಮಾ (ಹೆಚ್. ಪುಟ್ಟಸ್ವಾಮಿ) ಅವರು ಶ್ರೀವೈಷ್ಣವ ಸಮಾಜಕ್ಕೆ ಮಹೋಪಕಾರ ಮಾಡಿದ್ದಾರೆ. ಶ್ರೀಯುತರು ಈಗಾಗಲೇ ಕೆಲವು ಪುಸ್ತಕಗಳನ್ನು ಬರೆದು ಪ್ರಕಟಪಡಿಸಿರುವ ಶರ್ಮಾ ಅವರು ರಾಮಾನುಜ ಮತದಲ್ಲಿ ಶ್ರದ್ಧಾಭಕ್ತಿ ಉಳ್ಳವರು.

ಶ್ರೀಯುತರ ಲೇಖನಿಯಿಂದ ಇನ್ನೂ ಅನೇಕ ಸದ್‌ಗ್ರಂಥಗಳು ಪ್ರಕಾಶಿತವಾಗಲಿ. ಭಗವಂತನು ಇವರಿಗೆ ಆಯುರಾರೋಗ್ಯ, ಸುಖ ಸಂಪತ್ತುಗಳನ್ನು ಕೊಡಲಿ ಎಂದು ಹರಸುತ್ತೇನೆ.

**ಹಾ. ಜ. ರಾಮಯ್ಯಂಗಾರ್**

ನವೀನ, ಪ್ರಾಚೀನ ಉಭಯ ವೇದಾಂತ ವಿದ್ವಾನ್

**ಶ್ರೀ ಎನ್. ಎಸ್. ರಾಮಭದ್ರಾಚಾರ್ಯಸ್ವಾಮಿಗಳು**

ನಿವೃತ್ತ ಉಪ ಪ್ರಾಧ್ಯಾಪಕರು, ನ್ಯಾಯಶಾಸ್ತ್ರ — ಮೈಸೂರು

ಮ. ಸಂಸ್ಕೃತ ಕಾಲೇಜ್, ಮೈಸೂರು. — 5–5–94

# ಶುಭ ಕಾಮನೆಗಳು

"ಯಸ್ಯ ದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ" ಎಂಬುದಾಗಿ ದೇವರಲ್ಲಿ ಇಡುವ ಭಕ್ತಿಗೆ ಅನ್ಯೂನವಾದ ಭಕ್ತಿಯನ್ನೇ ಗುರುವಿನಲ್ಲಿಟ್ಟರೆ ತಾನೆ, ಜೀವಾತ್ಮನಿಗೆ ಗುರುವಿನ ಕಡೆಯಿಂದ ಹರಿದು ಬರುವ ಕೃಪೆಯು ತಲುಪುವುದು. ಇಲ್ಲದೆ ಇದ್ದಲ್ಲಿ ಗುರುವು ಎಷ್ಟೇ ಕರುಣಾಳುವಾದರೂ ಅವನ ಕರುಣೆ ಶಿಷ್ಯನ ಮೇಲೆ ಹರಿದು ಬಂದು ನಿಲ್ಲಲು ಅವನು ಪಾತ್ರನಾಗಲಾರನೆಂಬುದು ಶ್ರುತಿ ಸ್ಮೃತ್ಯಾದಿಗಳಲ್ಲಿ ಕಥೋಪಾಖ್ಯಾನಗಳ ಮೂಲಕ ಭಾರತೀಯ ಗುರು ಶಿಷ್ಯ ಸಂಪ್ರದಾಯಸ್ಥರಿಗೆ ವ್ಯಾವಹಾರಿಕವಾಗಿ ಬಂದಿರುವುದು. ಇದನ್ನು ಜೀವನದಲ್ಲಿ ಹಾಡಿ ಪಾಡಿದವರು, ಭಗವದ್ರಾಮಾನುಜರ ಶಿಷ್ಯರಾದ "ತಿರುವರಂಗತ್ತಮುದನಾರ್" ಅವರು. ಮಧುರ ಕವಿಗಳು, "ತೇವು ಮತ್ತರಿಯೇನ್" (ನಮ್ಮಾಳ್ವಾರರಿಗಿಂತ ಬೇರೆಯಾದ ದೇವತೆ ಯನ್ನು ನಾನು ಕಾಣೆ) ಎಂದು ಹೇಳಿರುವಂತೆ ತಿರುವರಂಗತ್ತ ಮುದನಾರ್ ಅವರು "ಇರಾಮಾನುಶನ್ ಮಿಕ್ಕ ಶೀಲ ಮಲ್ಲಾಲ್ ಉಳ್ಳಾದೆನ್ನೆಂಜು" (ರಾಮಾನುಜರ ಸರ್ವಾಧಿಕವಾದ ಸದ್ಗುಣ ಸದಾಚಾರಗಳು ಹೊರತು ಮತ್ತಾವುದನ್ನೂ ನನ್ನ ಹೃದಯವು ಒಳಕ್ಕೆ ತೆಗೆದುಕೊಳ್ಳುವುದಿಲ್ಲ) ಎನ್ನುತ್ತಾರೆ. ಇಂತಹ ಆಚಾರ್ಯನಿಷ್ಠೆಯು ಲೋಕಕ್ಕೆಲ್ಲಾ ಅರಿವಾಗಿ ಪರಮೋಪಕಾರಕವಾಗಲೆಂದು, ಅವರ ಮೂಲಕ ನೂತ್ತಂದಾದಿಯಾಗಿಯೂ, ಭಕ್ತರ ನಿರಂತರ ಗಾನ ಚಿಂತನೆಗಳಿಗೆ ಯೋಗ್ಯವಾಗಿಯೂ, ಉದ್ಧಾರಕವಾಗಿಯೂ ಈ ಪದ್ಯಮಾಲಿಕೆಯು "ಪ್ರಪನ್ನ ಗಾಯತ್ರಿ" "ನೂತ್ತೆಟ್ಟುಚ್ಚಾವಿತ್ತಿರಿ" ಎಂಬ ದಿವ್ಯನಾಮ ಹೊಂದಿ ಕಟ್ಟೆಯೊಡೆದು ಹರಿದು ಬರುವಂತಾದದ್ದು ನಮ್ಮೆಲ್ಲರ ಪುಣ್ಯರಾಶಿ ಎಂದರೆ ಅತಿಶಯೋಕ್ತಿಯಲ್ಲ. ಆಚಾರ್ಯರ ಈ ಗುಣಗಾನವು ದಿವ್ಯಪ್ರಬಂಧಗಳಿಗೆ ಸೇರಿಕೊಂಡು ಅನುಸಂಧಾನ ಪರಂಪರೆಗೆ ಸೇರಿದ್ದು ಹೇಳಲಾರದ ವೈಭವ.

ಈ ಪ್ರಬಂಧವನ್ನು ಕನ್ನಡದಲ್ಲಿ ಅರ್ಥಾನುವಾದ, ಕನ್ನಡ ತಾತ್ಪರ್ಯಗಳೊಂದಿಗೆ ಮುದ್ರಿಸಿ ಭಾಗವತ ಸೇವೆ ಮಾಡಿದ ಹಿರಿಮೆ ಪ್ರೊ|| ಹಾರೋಹಳ್ಳಿ ತಿರುವೇಂಗಡ ಶರ್ಮಾ (ಹೆಚ್. ಪುಟ್ಟಸ್ವಾಮಿ) ಅವರಿಗೆ ಸಲ್ಲತಕ್ಕದ್ದಾಗಿದೆ. ಇವರಿಂದ ಇಂತಹ ಅನೇಕ ಆಸ್ತಿಕ್ಯದ ಪವಿತ್ರ ಕಾರ್ಯಗಳು ನೆರವೇರಿ ಅವರ ಕಾಯ, ವಾಕ್, ಮನಸ್ಸುಗಳು ಆಚಾರ್ಯಾರ್ಪಿತವಾಗಲೆಂದು ಹಾರೈಸುತ್ತೇವೆ,

ಇಂತಿ ಶುಭಾಕಾಂಕ್ಷಿ,

**ಎನ್. ಎಸ್. ರಾಮಭದ್ರಾಚಾರ್ಯಸ್ವಾಮಿ**

# ನಿವೇದನೆ

ಅಂದು ಭಾದ್ರಪದ ಬಹುಳ ಅಷ್ಟಮಿ ಭಾನುವಾರ (20-9-1992) ಆರ್ದ್ರಾ ನಕ್ಷತ್ರ, ಮೇಲುಕೋಟೆಯಲ್ಲಿ ಶ್ರೀಮದ್ರಾಮಾನುಜರಿಗೆ ಜನ್ಮ ನಕ್ಷತ್ರದಲ್ಲಿ ಅಭಿಷೇಕ. ತಿರುನಾರಾಯಣಪುರಕ್ಕೆ ಹೋಗಿ ಅಂದು ಆಚಾರ್ಯರಿಗೆ ಅಭಿಷೇಕವಾಗುವುದನ್ನು ಕಂಡು ಪುನೀತನಾದೆ. ಅಷ್ಟರಲ್ಲಿ ಅಲ್ಲಿಯೇ ಇದ್ದ ನನ್ನ ಹಿತೈಷಿಗಳೂ, ವಯೋವೃದ್ಧರೂ, ಜ್ಞಾನವೃದ್ಧರೂ, ಭಗವದ್ಭಾಗವತ ಪ್ರೇಮಿಗಳೂ ಆದ ಅರೈಯರ್ ಶ್ರೀನಿವಾಸ ಅಯ್ಯಂಗಾರ್ ಸ್ವಾಮಿಗಳು ನನ್ನನ್ನು ಮನೆಗೆ ಕರೆದೊಯ್ದು ಉಣಬಡಿಸಿ, ನಾನು ಪ್ರಸಾದ ಸ್ವೀಕಾರ ಮಾಡುತ್ತಿರುವ ಕಾಲದಲ್ಲಿಯೇ ತಾವು ರಾಮಾನುಜಾಚಾರ್ಯರ ಗುಣಗಾನ ಮಾಡುತ್ತಾ ಅವರ ವಿಷಯಕವಾಗಿ ತಿರುವರಂಗತ್ತಮುದನಾರ್ ಅವರು ರಚಿಸಿರುವ ಇರಾಮಾನುಶ ನೂತ್ತಂದಾದಿಯ ಮೊದಲ ಇಪ್ಪತ್ತೈದು ಪಾಶುರಗಳನ್ನು ಪಠಿಸಿ ಅರ್ಥ ಸಹಿತ ನನಗೆ ಈ ದಿವ್ಯ ಪ್ರಬಂಧದಲ್ಲಿ ಆಸಕ್ತಿ ಮೂಡಿಸಿದರು. ಆಚಾರ್ಯರ ಅನುಗ್ರಹ ನನಗೆ ಒದಗಿ ಬಂತು, ಮುಂದಿನ ಮಾಸದ ಆರ್ದ್ರಾ ನಕ್ಷತ್ರದಂದು ಆಚಾರ್ಯರಿಗೆ ಅಭಿಷೇಕಾದಿಗಳು ಆದಮೇಲೆ ಅಂದು ಅವರ ಪಾದಗಳಲ್ಲಿ ಇರಾಮಾನುಶ ನೂತ್ತಂದಾದಿಯ ಕನ್ನಡ ಅನುವಾದವನ್ನು ಅರ್ಪಿಸುವ ಸಂಕಲ್ಪ ನನ್ನದಾಯ್ತು. ಅಂತೆಯೇ ಆಶ್ವಯುಜ ಬಹುಳ ಸಪ್ತಮಿ (18-10-92) ಭಾನುವಾರ ಆರ್ದ್ರಾ ನಕ್ಷತ್ರದಂದು ಈ "ಶ್ರೀ ಮದ್ರಾಮಾನುಜ ನೂರಂತ್ಯಾದಿ" ಹಸ್ತಪ್ರತಿ ಸಿದ್ಧಪಡಿಸಿ ಆಚಾರ್ಯರ ಪಾದಗಳಲ್ಲಿ ಅರ್ಪಿಸಿ ಪ್ರಕಟಣೆಗೆ ಅವರ ಅನುಮತಿ ಪಡೆಯಲು ಸಫಲನಾದೆ. ಇದಕ್ಕೆ ಮೂಲಭೂತರಾದ ಅರೈಯರ್ ಸ್ವಾಮಿಗಳವರ ಅಡಿಯಲ್ಲಿ ಮುಡಿಯಿಟ್ಟು ಸಾಷ್ಟಾಂಗ ಪ್ರಣಾಮಗಳನ್ನರ್ಪಿಸುವೆನು. ನನ್ನ ಸನ್ಮಿತ್ರರಾದ ಡಾ|| ಎಂ. ಎಸ್. ಯೋಗಾನರಸಿಂಹ ಪಂಡಿತ್, ಮೈಸೂರು ಅವರು ನನ್ನ ಕೃತಿ ರಚನೆಯ ಕಾಲದಲ್ಲಿ ಮತ್ತು ಮುದ್ರಣ ಕಾಲದಲ್ಲಿ ಸಹಕರಿಸಿ ಉತ್ತೇಜನ ಕೊಟ್ಟಿರುವರು ಅವರಿಗೆ ನನ್ನ ಅಂತಃಕರಣವ ಆಣತಿಯಂತೆ ಮಣಿಯುತ್ತಿರುವೆನು. ಈ ಪುಸ್ತಕ **ಪ್ರಕಟಣೆಗಾಗಿ ತಿರುಮಲೆ ತಿರುಪತಿಯ ದೇವಸ್ಥಾನದ ಸಮಿತಿಯು ಧನಸಹಾಯ ಮಾಡಿ** ಉಪಕಾರ ಮಾಡಿದ್ದಾರೆ, ಅದರ ಕಾರ್ಯನಿರ್ವಹಣಾಧಿಕಾರಿ ಶ್ರೀಯುತ ಡಿ. ವಿ. ಎಲ್. ಎನ್. ಮೂರ್ತಿ ಅವರಿಗೂ ಸಂಪಾದಕರಾದ ಶ್ರೀ ಕೆ. ಸುಬ್ಬರಾವ್ ಮತ್ತು ಉಪಸಂಪಾದಕರಾದ ಶ್ರೀ ಬಿ. ಎನ್. ಶ್ರೀನಿವಾಸನ್ ಅವರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಯದುಗಿರಿ ಯತಿರಾಜ ಮಠಾಧೀಶರಾದ ಶ್ರೀ ಶ್ರೀ ಶ್ರೀ ಆಸೂರಿ ಸಂಪತ್ಕುಮಾರ ರಾಮಾನುಜ ಜೀಯರ್ ಸ್ವಾಮಿಗಳವರು, ಮೈಸೂರಿನ ಶ್ರೀ ಬ್ರಹ್ಮತಂತ್ರ ಸ್ವತಂತ್ರ ಪರಕಾಲ ಸ್ವಾಮಿ ಮಠಾಧೀಶರಾದ ಶ್ರೀ ಮದಭಿನವ ವಾಗೀಶ ಬ್ರಹ್ಮತಂತ್ರ ಸ್ವತಂತ್ರ ಪರಕಾಲ ಮಹಾದೇಶಿಕ ಸ್ವಾಮಿಗಳವರುಗಳು ಅನುಗ್ರಹ ಶ್ರೀಮುಖ ಸಂದೇಶಗಳನ್ನು

ಕರುಣಿಸಿರುವರು. ಅವರುಗಳಿಗೆ ನನ್ನ ಸಾಷ್ಟಾಂಗ ಪ್ರಣಾಮಗಳು. ವೇದಾಂತ ವಿದ್ವಾನ್ ಡಾ|| ಎನ್. ಎಸ್. ಅನಂತರಂಗಾಚಾರ್ಯರು ಮುನ್ನುಡಿಯನ್ನು ಅನುಗ್ರಹಿಸಿರುವರು. ಶ್ರೀಯುತರುಗಳಾದ ಉಭಯ ವೇದಾಂತ ವಿದ್ವಾನ್ ಎನ್. ಎಸ್. ರಾಮಭದ್ರಾಚಾರ್ಯಸ್ವಾಮಿಗಳವರು, ಆಗಮ ಚಕ್ರವರ್ತಿ. ಆಗಮ ಸಾಹಿತ್ಯಭೂಷಣ ಸವ್ಯಸಾಚಿ ಸ್ವಾಮಿಜೀಯವರು ಮತ್ತು ಅನೇಕ ಶ್ರೀ ವೈಷ್ಣವ ಸದ್‌ಗ್ರಂಥಗಳ ಕರ್ತೃ ಶ್ರೀ ಹೆಚ್. ಜೆ. ರಾಮ ಅಯ್ಯಂಗಾರ್ ಅವರುಗಳು ಶುಭಕಾಮನೆಗಳನ್ನು ಕೋರಿರುವುದರಿಂದ ಎಲ್ಲ ಮಾನ್ಯರಿಗೂ ನನ್ನ ಅನಂತ ನಮಸ್ಕಾರಗಳು. ನನ್ನ ಸಹಧರ್ಮಿಣಿ ಶ್ರೀಮತಿ ಎ. ಆರ್. ವಿಜಯಲಕ್ಷ್ಮಿ ನನ್ನ ಈ ಕೃತಿರಚನೆಯ ಕಾಲದಲ್ಲಿ ತೋರಿದ ಸಹಕಾರ ಮತ್ತು ನೈತಿಕ ಬೆಂಬಲಕ್ಕಾಗಿ ನನ್ನ ಕೃತಜ್ಞತೆಗಳು. ಬೆಂಗಳೂರಿನ ಎಸ್. ಆನಂದಕುಮಾರ್ ಅವರು ರಕ್ಷಾಪುಟಕ್ಕೆ ಪ್ಲಾಸ್ಟಿಕ್ ಲ್ಯಾಮಿನೇಷನ್ ಮಾಡಿಕೊಟ್ಟಿರುವರು ಆದಕ್ಕಾಗಿ ಅವರಿಗೆ ನನ್ನ ಅನಂತ ನಮಸ್ಕಾರಗಳು.

ಭಗವದ್ಭಾಗವತ ಪ್ರೇಮಿಗಳೂ ಮೈಸೂರಿನ 'ಪ್ರಿಂಟ್ ಷಾಪ್'ನ ಮಾಲೀಕರೂ ಆದ ಶ್ರೀ ವಿ. ಸತೀಶ್ ಕುಮಾರ್ ಅವರು ಹೆಚ್ಚಿನ ಜವಾಬ್ದಾರಿಯಿಂದ ಈ ಪುಸ್ತಕವನ್ನು ಪೂರ್ಣಗೊಳಿಸಲು ಕಾರಣರಾಗಿದ್ದಾರೆ ಮತ್ತು ಪುಸ್ತಕದಲ್ಲಿ ಅಚ್ಚಿನ ದೋಷವಿಲ್ಲದಂತೆ ಅಕ್ಷರ ಸಂಯೋಜನೆ ಮಾಡಿ ಉತ್ತಮವಾಗಿ ವಿನ್ಯಾಸಗೊಳಿಸಿದ ಶಿಲ್ಪಿ ಶ್ರೀಮಾನ್ ವೈ. ಚಂದ್ರಶೇಖರ್ ಇವರುಗಳಿಗೆ ವಿನಯಪೂರ್ವಕ ಪ್ರಣಾಮಗಳನ್ನು ಸಲ್ಲಿಸುತ್ತಿರುವೆನು.

ಶ್ರೀಮದ್ರಾಮಾನುಜಾಚಾರ್ಯರ ಜಯಂತಿ
ಆದ್ರಾ ನಕ್ಷತ್ರ, ವೈಶಾಖ ಬಹುಳ ಚತುರ್ಥಿ
ಶನಿವಾರ 14–5–1994

ಅಡಿಯೇನ್ ರಾಮಾನುಜದಾಸನ್

**ಪ್ರೊ|| ಹಾರೋಹಳ್ಳಿ ತಿರುವೇಂಗಡ ಶರ್ಮಾ**

**(ಹೆಚ್. ಪುಟ್ಟಸ್ವಾಮಿ)**

# ದಿವ್ಯದೇಶಗಳಲ್ಲಿ ಶ್ರೀಮದ್ರಾಮಾನುಜಾಚಾರ್ಯರು



ಶ್ರೀಪೆರಂಬೂದೂರು



ಮೇಲುಕೋಟೆ



ಶ್ರೀರಂಗಂ

ಯೋನಿತ್ಯಮಚ್ಯುತ ಪದಾಂಬುಜ ಯುಗ್ಮರುಕ್ಮ । ವ್ಯಾಮೋಹತಸ್ತದಿತರಾಣಿ ತೃಣಾಯಮೇನೇ ।
ಅಸ್ಮದ್ಗುರೋರ್ಭಗವತೋಽಸ್ಯ ದಯೈಕಸಿಂಧೋಃ । ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ ॥

॥ ಶ್ರೀಮತೇ ರಾಮಾನುಜಾಯ ನಮಃ ॥
॥ ಶ್ರೀಯೈ ನಮಃ ಶ್ರೀಧರಾಯ ನಮಃ ॥

    

# ಶ್ರೀಮದ್ರಾಮಾನುಜ ನೂರಂತ್ಯಾದಿ

**(ಇರಾಮಾನುಶ ನೂತ್ತಂದಾದಿ)**

## ದಿವ್ಯ ಪ್ರಬಂಧ

ಶ್ರೀರಂಗೇ ಮೀನಹಸ್ತೇಜ ಜಾತಂ ರಂಗಾರ್ಯ ನಂದನಮ್ ।
ರಾಮಾನುಜ ಪದಾಸಕ್ತಂ ರಂಗನಾಥ ಗುರುಂ ಭಜೇ ॥

ಶ್ರೀರಂಗ ಕ್ಷೇತ್ರದಲ್ಲಿನ ಮೂಂಗಿಲ್ ವಂಶದ ಅಣಿಯ ರಂಗತ್ತಮುದನಾರ್ ಎಂಬುವವರ ಕುಮಾರರೇ "ಇರಾಮಾನುಜ ನೂತ್ತಂದಾದಿ" ಎಂಬ ದಿವ್ಯಪ್ರಬಂಧ ವನ್ನು ತಮಿಳು ಭಾಷೆಯಲ್ಲಿ ರಾಮಾನುಜರ ಕಾಲದಲ್ಲಿಯೇ ರಚಿಸಿದರು. ಈ ಮಹಾತ್ಮರೇ **ತಿರುವರಂಗತ್ತ ಮುದನಾರ್** ಎಂಬುವರು. ಇವರು ಫಾಲ್ಗುಣ ಮಾಸದ ಹಸ್ತಾ ನಕ್ಷತ್ರದಂದು ಅವತಾರ ಮಾಡಿದರು. ಇವರಿಗೆ **ಮೂಂಗಿಲ್ ಕುಡಿಯಮುದನಾರ್** ಎಂಬ ಹೆಸರೂ ಉಂಟು. ಕೂರತ್ತಾಳ್ವಾರ್ ಅವರ ಸನ್ನಿಧಿ ಯನ್ನು ಆಶ್ರಯಿಸುವಂತೆ ರಾಮಾನುಜಾಚಾರ್ಯರೇ ಆಣತಿ ಇತ್ತರು. ಇವರು ಪರಮ ಆಚಾರ್ಯರಾದ ಶ್ರೀಮದ್ರಾಮಾನುಜಾಚಾರ್ಯರ ಮತ್ತು ಅವರ ತಿರುವಡಿಗಳಲ್ಲಿ ಅತ್ಯಂತ ಪ್ರಾವಣ್ಯ ಉಳ್ಳವರಾಗಿದ್ದರು. ಇವರು ಒಂದುನೂರಎಂಟು ವರ್ಷಗಳು ಬದುಕಿ ದ್ದರು. ಇವರ ವಂಶಪಾರಂಪರ್ಯ ಶ್ರೀರಂಗದಲ್ಲಿ "ಬ್ರಹ್ಮರಥ" ಮರ್ಯಾದೆ ಸಂದಿದೆ. ರಾಮಾನುಜರನ್ನು ಕುರಿತಾದ, "ಇರಾಮಾನುಶ ನೂತ್ತಂದಾದಿ"ಯನ್ನು ಅಂತ್ಯಾದಿ ಕ್ರಮದಲ್ಲಿ ದ್ರಾವಿಡ ಭಾಷೆಯಲ್ಲಿ ಈ ತಿರುವರಂಗತ್ತ ಮುದನಾರ್ ಅವರು ಕರುಣಿಸಿರು ವರು. ಈ ಗ್ರಂಥಕ್ಕೆ ಮಣವಾಳ ಮಾಮುನಿಗಳು ಪ್ರಸಾದಿಸಿರುವ ಕ್ರಮದಲ್ಲಿ, ಪಿಳ್ಳೈ ಲೋಕಮ್ ಜೀಯರ್ ಅವರ ವ್ಯಾಖ್ಯಾನವನ್ನನುಸರಿಸಿ, ಶ್ರೀರಾಯಪೇಟೆ–ಲಕ್ಷ್ಮಯ್ಯ ನವರ ಮಕ್ಕಳು ಶ್ರೀನಿವಾಸ ರಾಮಾನುಜಯ್ಯನವರು ರಚಿಸಿರುವ ಮತ್ತು ಕಾಂಚಿ ಪ್ರತಿವಾದಿ ಭಯಂಕರಂ ಅಣ್ಣಂಗರಾಚಾರ್ಯ ಸ್ವಾಮಿಗಳವರೂ ರಚಿಸಿರುವ ಆಂಧ್ರ ಭಾಷೆಯ ಪ್ರತಿಪದಾರ್ಥ ವ್ಯಾಖ್ಯಾನಗಳನ್ನನುಸರಿಸಿ, ಪ್ರೊಫೆಸರ್ ಹೆಚ್. ಪುಟ್ಟಸ್ವಾಮಿ, ಅರ್ಥಾತ್ ಹಾರೋಹಳ್ಳಿ ತಿರುವೇಂಗಡ ಶರ್ಮರಿಂದ ಕನ್ನಡದಲ್ಲಿ ತಮಿಳು ಮೂಲ, ಅರ್ಥ, ತಾತ್ಪರ್ಯಗಳು ರಚಿತವಾಗಿದೆ.

# ಶ್ರೀ ಭಾಷ್ಯಕಾರರ ವೈಭವ

ಶ್ರಿಯಃ ಪತಿಯಾದ ಸರ್ವೇಶ್ವರನ ನಿಯಮದ ಪ್ರಕಾರ ಅನಂತಾಳ್ವಾರ್ ಎಂಬ ಆದಿಶೇಷನು, ಭಾರತದ ತೊಂಡಮಂಡಲದಲ್ಲಿ ಅವತರಿಸಿದನು.

ಯಥಾವತಾರಾನ್ ಮಧುರಾ ಮುರಾರೇ–ರಾಮಸ್ಯ ಸಾಕೇತ ಪುರೀಚ ಯದ್ವತ್ ।
ತಥಾ ಯತೀಂದ್ರಸ್ಯಕೃಪಾಶ್ರಯಸ್ಯ–ಪುಣ್ಯೋತ್ತರಾ ಭೂತಪುರೀ ಬಭೂವ ॥

ಶ್ರೀರಾಮ ಮತ್ತು ಶ್ರೀಕೃಷ್ಣ ಇವರುಗಳ ಅವತಾರ ವಿಶೇಷಗಳಿಗೆ ಪ್ರಸಿದ್ಧಿಯಾದ, ಅಯೋಧ್ಯಾ ಮತ್ತು ಮಧುರಾ ಪಟ್ಟಣಗಳ ರೀತಿಯಲ್ಲಿ ಯತಿರಾಜರ ಅವತಾರದಿಂದ ಭೂತಪುರಿ ಎಂಬ ಶ್ರೀಪೆರಂಬೂದೂರು ಎಂಬ ಸ್ಥಳವು ದಿವ್ಯಕ್ಷೇತ್ರವಾಗಿ ಪುಣ್ಯತಮ ವಾಗಿದೆ. ಕಲಿ ಸಂವತ್ಸರ 4118 ಕ್ಕೆ ಸಮನಾದ ಪಿಂಗಳನಾಮ ಸಂವತ್ಸರ, ಕ್ರಿ. ಶ. 1017 ಚಿತ್ತಿರೈಮಾಸದ ಶುಕ್ಲಪಕ್ಷ ಪಂಚಮಿ, ಗುರುವಾರ ಮಧ್ಯಾಹ್ನದಲ್ಲಿ ಆದ್ರಾ ನಕ್ಷತ್ರದಿಂದ ಕೂಡಿದ ಕರ್ಕಾಟಕ ಲಗ್ನದಲ್ಲಿ, ಹಾರೀತ ಗೋತ್ರದ ಆಸೂರಿ ಸರ್ವಕ್ರತು ಕೇಶವ ದೀಕ್ಷಿತರು ಮತ್ತು ಧರ್ಮಪತ್ನಿ ಕಾಂತಿಮತಿ ದೇವಿಯರಿಗೆ ಸುಪುತ್ರರಾಗಿ ಆಚಾರ್ಯರು ಅವತರಿಸಿದರು. ಮಗುವಿಗೆ ತಂದೆಯು **" ಇಳೈ ಆಳ್ವಾರ್ "** ಎಂದು ಹೆಸರಿಟ್ಟರು. ಸಕ್ರಮವಾಗಿ, ಚೌಲೋಪನಯನಾದಿಗಳನ್ನು ಮಾಡಿಸಿ, ವೇದಾಧ್ಯಯನ ಮತ್ತು ನಿತ್ಯಾನುಸಂಧಾನಗಳನ್ನು ತಂದೆಯವರೇ ಕರುಣಿಸಿದರು. ಮಗುವನ್ನು ಸೋದರಮಾವನವರಾದ ಶ್ರೀಶೈಲಪೂರ್ಣ ಅಥವಾ ತಿರುಮಲೈನಂಬಿಯವರು ಕಟಾಕ್ಷಿಸಿ, ಆದಿಶೇಷನ ಅವತಾರವೆಂದರಿತು, ಲಕ್ಷ್ಮಣಸ್ವಾಮಿಯ ಪುನರವತಾರಿ **"ರಾಮಾನುಜ"** ಎಂದು ಕರೆದರು. ಶಾಸ್ತ್ರಾಭ್ಯಾಸಕ್ಕಾಗಿ ಕಾಂಚೀಪುರದಲ್ಲಿ ಯಾದವ ಪ್ರಕಾಶರೆಂಬ ಪಂಡಿತರಲ್ಲಿ ಸೇರಿದರು. ಅಲ್ಲಿನ ರಾಜಕುಮಾರಿಗೆ ಹಿಡಿದಿದ್ದ ಬ್ರಹ್ಮರಾಕ್ಷಸನಿಗೆ, ಆಶ್ರಮವಾಸಿಯಾಗಿರುವಾಗಲೇ ಮೋಕ್ಷವನ್ನು ಪ್ರಸಾದಿಸಿದರು. ಕಂಚಿಯಲ್ಲಿ ವರದರಾಜ ಸ್ವಾಮಿಯ ಅಂತರಂಗ ಭಕ್ತರೂ ಮತ್ತು ಯಾಮುನಾಚಾರ್ಯರ ಪ್ರಮುಖ ಶಿಷ್ಯರಲ್ಲೊಬ್ಬರಾದ, ಕಾಂಚೀಪೂರ್ಣ ಅಥವಾ ತಿರುಕ್ಕಚ್ಚಿ ನಂಬಿಯವರ ಮೂಲಕ ತಮ್ಮನ್ನು ಬಾಧಿಸುತ್ತಿದ್ದ ಆರು ಸಂದೇಹಗಳನ್ನು ವರದರಾಜ ಸ್ವಾಮಿಯಿಂದ ಪರಿಹರಿಸಿ ಕೊಂಡರು. ಸ್ವಾಮಿಯ ತಿರುಮಂಜನಕ್ಕೆ ತೀರ್ಥವನ್ನು ತಂದುಕೊಡುವ ಕೈಂಕರ್ಯ ನಿರತರಾದರು. ಇವರಿಗೆ ಪೆರಿಯನಂಬಿ ಅಥವಾ ಮಹಾಪೂರ್ಣರು ಮಧುರಾಂತಕದ ಶ್ರೀರಾಮಚಂದ್ರಮೂರ್ತಿಯ ಸನ್ನಿಧಿಯಲ್ಲಿ ಪಂಚ ಸಂಸ್ಕಾರಗಳನ್ನು ಮಾಡಿ, ಶ್ರೀವೈಷ್ಣವರನ್ನಾಗಿಸಿ ವಿಶಿಷ್ಟಾದ್ವೈತ ಪ್ರತಿಪಾದನೆಗೆ ಕಾರಣರಾದರು. ಈ ಮಹಾ ಪೂರ್ಣರಿಂದಲೇ ರಾಮಾನುಜರು ದಿವ್ಯಪ್ರಬಂಧಗಳಲ್ಲಿನ ಮೊದಲಾಯಿರಂ ಇಯರ್ಪಾ ಮತ್ತು ದರ್ಶನ ರಹಸ್ಯಗಳನ್ನು ಬೋಧಿಸಲ್ಪಟ್ಟರು. ಸಂಸಾರದಲ್ಲಿ ಜಿಗುಪ್ಸೆಹೊಂದಿ, ಮಡದಿ ರಕ್ಷಂಬಾಳ್ ಅವರನ್ನು ತೌರುಮನೆಗೆ ಕಳುಹಿಸಿ, ವರದರಾಜನ ಸನ್ನಿಧಿಯಲ್ಲಿ

ಸನ್ಯಾಸವನ್ನು ಸ್ವೀಕರಿಸಿದರು. ಆಗ ವರದರಾಜ ಸ್ವಾಮಿಯು ಇವರಿಗೆ, **"ಯತಿರಾಜ"** ಎಂಬ ಹೆಸರನ್ನು ಕರುಣಿಸಿದನು. ಇವರಿಗೆ ಕೂರತ್ತಾಳ್ವಾರ್ ಮತ್ತು ತಂಗಿಯ ಮಗ ದಾಶರಥಿ ಅವರುಗಳು ಶಿಷ್ಯರಾದರು. ಈ ಯತಿರಾಜರ ಪೂರ್ವಾಶ್ರಮದ ಶಾಸ್ತ್ರಾಧ್ಯಯನದ ಗುರು, ತಿರುಪುಟ್ಕುಳಿಯ ಯಾದವ ಪ್ರಕಾಶರೆಂಬ ಪಂಡಿತರೂ, ಅದ್ವೈತ ಸಿದ್ಧಾಂತ ಪ್ರವೀಣರೂ ಆಗಿದ್ದವರು, ಈಗ ಯತಿರಾಜರನ್ನೇ ಆಶ್ರಯಿಸಿ, ಶಿಷ್ಯರಾಗಿ ಪಂಚ ಸಂಸ್ಕಾರಗಳನ್ನು ಪಡೆದುಕೊಂಡು, "ಗೋವಿಂದ ಜೀಯರ್" ಎಂಬ ನಾಮಾಂಕಿತದಿಂದ ಪ್ರಕಾಶಿಸಿದರು. ರಾಮಾನುಜರ ಇಚ್ಛೆಯಂತೆ ಗೋವಿಂದ ಜೀಯರ್ ಅವರು "ಯತಿಧರ್ಮ ಸಮುಚ್ಚಯಂ" ಎಂಬ ಗ್ರಂಥವನ್ನು ರಚಿಸಿದರು.

ರಾಮಾನುಜರು ಶ್ರೀರಂಗಕ್ಕೆ ತೆರಳಿ ಅಲ್ಲಿ ಶ್ರೀರಂಗನಾಥನ ಆಣತಿಯಂತೆ, ದೇವಾಲಯದ ಕಾರ್ಯನಿರ್ವಾಹವನ್ನು ಹೊತ್ತು ಶ್ರೀರಂಗನಾಥನಿಂದಲೇ **"ಉಡೈಯವರ್"** ಎಂಬ ಹೆಸರು ಪಡೆದರು. ಯಾಮುನಾಚಾರ್ಯರ ಮತ್ತೊಬ್ಬ ಶಿಷ್ಯರಾದ ತಿರುವರಂಗ ಪ್ಪೆರುಮಾಳ್ ಅರೈಯರ್ ಅವರಿಂದ ದಿವ್ಯ ಪ್ರಬಂಧಗಳಲ್ಲಿ ಮುಖ್ಯವಾದ, ಪೆರಿಯ ತಿರುಮೊಳಿ, ತಿರುವಾಯ್ಮೊಳಿ, ಕಣ್ಣಿನುಣ್‌ಶಿರುತ್ತಾಂಬು ಗಳನ್ನು ಸಮಗ್ರವಾಗಿ ಬೋಧಿಸಲ್ಪಟ್ಟರು. ಅರೈಯರ್ ಅವರು ಇವರಿಗೆ **"ಲಕ್ಷ್ಮಣಮುನಿ"** ಎಂಬ ಹೆಸರನ್ನು ಕರುಣಿಸಿ ತಮ್ಮ ಪುತ್ರ "ಶೊಟ್ಟೈ ನಂಬಿ" ಯನ್ನು ಇವರ ಶಿಷ್ಯನನ್ನಾಗಿಸಿದರು. ಯಾಮುನಾಚಾರ್ಯರ ಮತ್ತೊಬ್ಬ ಪ್ರಮುಖ ಶಿಷ್ಯರಾದ **"ಗೋಷ್ಠಿಪೂರ್ಣ ಅಥವಾ ತಿರುಕ್ಕೋಟಿಯೂರ್ ನಂಬಿ"** ಅವರಿಂದ ತಿರುಮಂತ್ರಾರ್ಥ ಮತ್ತು ಚರಮ ಶ್ಲೋಕಗಳನ್ನು ರಹಸ್ಯಾರ್ಥಗಳೊಡನೆ ಪಡೆದು ಕೊಂಡರಲ್ಲದೆ ಅವರಿಂದ **"ಎಂಬೆರುಮಾನಾರ್"** ಎಂಬ ತಿರುನಾಮವನ್ನೂ ಪಡೆದು ಕೊಂಡರು. ಈ **ಗೋಷ್ಠಿ**ಪೂರ್ಣರು ತಮ್ಮ ಮಗನಾದ "ತೆರ್ಕಾಳ್ವಾರ್" ಎಂಬುವ ರನ್ನು ಎಂಬೆರುಮಾನರ ಶಿಷ್ಯನನ್ನಾಗಿಸಿದರು. ಯಾಮುನಾಚಾರ್ಯರ ಮತ್ತೊಬ್ಬ ಪ್ರಮುಖ ಶಿಷ್ಯರಾದ, "ತಿರುಮಾಲೈ ಆಂಡಾನ್ ಅಥವಾ ಮಾಲಾಧರ" ಅವರು ನಾಲಾಯಿರ ದಿವ್ಯಪ್ರಬಂಧಗಳನ್ನೂ ವ್ಯಾಖ್ಯಾನ ಸಹಿತ ಉಡೈಯವರಿಗೆ ಕರುಣಿಸಿದಲ್ಲದೆ ತಮ್ಮ ಮಗ "ಶುಂದರ ತೋಳುಡೈಯರ್" ಎಂಬುವರನ್ನು ಇವರಿಗೆ ಶಿಷ್ಯನನ್ನಾಗಿ ಸಿದರು. "ಪೆರಿಯ ತಿರುಮಲೈನಂಬಿ, ಶ್ರೀಶೈಲಪೂರ್ಣ ಅಥವಾ ತಾತಾಚಾರ್ಯ" ಅವರಿಂದ ಒಂದು ವರ್ಷಕಾಲ ತಿರುಪತಿಯಲ್ಲಿದ್ದು ಶ್ರೀಮದ್ರಾಮಾಯಣವನ್ನು ವ್ಯಾಖ್ಯಾನ ಸಹಿತ ಬೋಧಿಸಲ್ಪಟ್ಟರು. ಶ್ರೀಶೈಲಪೂರ್ಣರು ತಮ್ಮ ಪ್ರಿಯ ಶಿಷ್ಯ "ಗೋವಿಂದ ಭಟ್ಟರ್ (ಎಂಬಾರ್)" ಅವರನ್ನು ರಾಮಾನುಜರಿಗೆ ಧಾರೆಯೆರೆದು ಕೊಟ್ಟರಲ್ಲದೆ ತಮ್ಮ ಮಗ "ಪಿಳ್ಳೈ ತಿರುಮಲ ನಂಬಿ"ಯನ್ನು ಶಿಷ್ಯನನ್ನಾಗಿ ಮಾಡಿ ಇವರಿಗೆ, **"ಕೋಯಿಲಣ್ಣನ್"** ಎಂಬ ಹೆಸರನಿತ್ತರು. ಯಾಮುನಾಚಾರ್ಯರು ರಾಮಾನುಜರಿ ಗಾಗಿ ನ್ಯಾಸವಾಗಿರಿಸಿದ್ದ ಸರ್ವ ವಿಷಯಗಳನ್ನು ಅವರ ಐದು ಜನ ಪ್ರಧಾನ್ಯ ಶಿಷ್ಯ ರನ್ನು ಅಂದರೆ, **ಗೋಷ್ಠಿಪೂರ್ಣ**, ಅರೈಯರ್, ಮಹಾಪೂರ್ಣ, ಶ್ರೀಶೈಲಪೂರ್ಣ

ಮತ್ತು ಮೂಲಾಧರ ಅವರುಗಳನ್ನು ಸೇವಿಸಿ ಪಡೆದುಕೊಂಡು, ಯಾಮುನಾಚಾರ್ಯರ ಇಚ್ಛೆಯಂತೆ ಪರಿಪೂರ್ಣಮತಿಯಾಗಿ, " **ರಾಮಾನುಜಾಚಾರ್ಯ** " ರಾದರು. ಬ್ರಹ್ಮಸೂತ್ರಕ್ಕೆ ವಿಶಿಷ್ಟಾದ್ವೈತಾನುಸಾರ ಭಾಷ್ಯವನ್ನು ರಚಿಸಿ ಅದಕ್ಕೆ ಶ್ರೀಭಾಷ್ಯ ಎಂದು ಕರೆದುದರಿಂದ ಇವರಿಗೆ " **ಶ್ರೀಭಾಷ್ಯಕಾರ** " ರೆಂದು ಹೆಸರಾಯಿತು. ಇವರು ಶ್ರೀಭಾಷ್ಯವೇ ಅಲ್ಲದೆ, ವೇದಾಂತ ಸಾರ, ವೇದಾಂತ ದೀಪ, ವೇದಾರ್ಥ ಸಂಗ್ರಹ, ಗದ್ಯತ್ರಯ, ಉಚ್ಚೈಯವರ್ ನಿತ್ಯಂ ಮತ್ತು ಗೀತಾ ಭಾಷ್ಯಗಳನ್ನು ರಚಿಸಿ ಚಿರಂಜೀವಿ ಗಳಾಗಿದ್ದಾರೆ. ಇವರು ಯಜ್ಞಮೂರ್ತಿ ಎಂಬ ಕಾಶಿಯಲ್ಲಿನ ಅದ್ವೈತ ಮಹಾ ಪಂಡಿತನೊಡನೆ ವಾದ ನಡೆಸಿ, ಅವನ ಮಾಯಾವಾದಗಳನ್ನೆಲ್ಲಾ ಧ್ವಂಸಗೊಳಿಸಿ, ಅವನನ್ನು ಪರಾಜಿತನನ್ನಾಗಿ ಮಾಡಿ, ಅವನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿ, " ಅರುಳಾಳಪ್ಪೆರುಮಾಳ್ ಎಂಬೆರುಮಾನಾರ್ " ಎಂಬ ಹೆಸರನ್ನಿತ್ತರು. ಇವರಿಗೆ ದೇವರಾಜಮುನಿ ಎಂಬ ಹೆಸರೂ ಉಂಟು. ಭೂಪ್ರದಕ್ಷಿಣೆ ಮಾಡಿ ಅನೇಕ ಮಾಯಾ ವಾದಿಗಳನ್ನೂ ಚಾರ್ವಾಕರನ್ನೂ, ಜೈನರನ್ನೂ ಅವರ ಮಾಯಾವಾದಗಳನ್ನೂ ಸೋಲಿಸಿ, ದಿಗ್ವಿಜಯವನ್ನು ಸಾಧಿಸಿ ಶಿಷ್ಯಕೋಟಿಯನ್ನೂ ಸಂಪಾದಿಸಿಕೊಂಡರು. ತಿರುಮಲೆಗೆ ಹೋಗಿ ಶ್ರೀನಿವಾಸನಿಗೆ ಶಂಖ ಚಕ್ರ ಧಾರಣೆ ಮಾಡಿಸಿದ ಕೀರ್ತಿ ಇವರ ದಾಯಿತು. ಸ್ವಾಮಿಯ ವಕ್ಷ ಸ್ಥಳಕ್ಕೆ ಅಲರ್‌ಮೇಲ್‌ಮಂಗ ತಾಯಾರ್ ಅವರನ್ನೂ ಭೂ ದೇವಿಯನ್ನೂ ಬಿಜಮಾಡಿಸಿ ಸ್ಥಾಪಿಸಿ, **ಶ್ರೀನಿವಾಸನಿಗೆ ಮಾವನವರಾದರು.** ಸುಲ್ತಾನನ ಮನೆಯಲ್ಲಿ ನೆಲೆಸಿದ್ದ ರಾಮಪ್ರಿಯಮೂರ್ತಿಯನ್ನು " ಶೆಲ್ವಪಿಳ್ಳೈ ಬಾ " ಎಂದು ಕರೆದು ಬಿಜಮಾಡಿಸಿಕೊಂಡು ಮೇಲುಕೋಟೆಯಲ್ಲಿನ ಉತ್ಸವಮೂರ್ತಿ ಯನ್ನಾಗಿ ಸ್ಥಾಪಿಸಿ, **ಚಲುವರಾಯನಿಗೆ ತಂದೆಯಾದರು.** ತಮ್ಮ ವಿಗ್ರಹವನ್ನು ಕೆತ್ತಿಸಿ, ತಮ್ಮ ಶಕ್ತಿಯನ್ನೆಲ್ಲಾ ಧಾರೆಯೆರೆದು ಶಿಷ್ಯರೊಡನೆ ಆ ವಿಗ್ರಹದಿಂದ ಮಾತನಾಡಿಸಿ ಪ್ರತಿಷ್ಠಾಪಿಸಿದ ಆಚಾರ್ಯರ ಅರ್ಚಾಮೂರ್ತಿಯಲ್ಲಿ ಇಂದಿಗೂ ನೆಲೆಸಿದ್ದಾರೆ. ಮಿಥುನ ಸಾಲಿಗ್ರಾಮದಲ್ಲಿ ವಡಗು ನಂಬಿ ಅವರಿಗೆ ತಮ್ಮ ಪಾದುಕೆ ಗಳನ್ನೂ ಮತ್ತು ಶ್ರೀಪಾದ ತೀರ್ಥವನ್ನೂ ಕರುಣಿಸಿದರು. ಈ ರೀತಿ ಆಚಾರ್ಯರು ಕರ್ನಾಟಕದಲ್ಲಿ ಕ್ರಿ. ಶ. 1096 ರಿಂದ 1118 ವರೆಗೆ ಇಪ್ಪತ್ತೆರಡು ವರ್ಷಗಳು ನೆಲೆಸಿದ್ದು ನಂತರ ಶ್ರೀರಂಗಕ್ಕೆ ತೆರಳಿದರು. ಆಂಡಾಳ್ (ಗೋದಾ ದೇವಿಯು) ಶ್ರೀರಂಗ ನಾಥನನ್ನು ಪಡೆಯುವುದಕ್ಕೆ ಮೊದಲು ಹೊತ್ತಿದ್ದ ಹರಕೆಯ ವಿಚಾರವನ್ನು ನಾಚ್ಚಿಯಾರ್ ತಿರುವೊಳಿಯ 9–6 ನೇ ಪಾಶುರ (ಶ್ಲೋಕ) ದಲ್ಲಿ ಬರುವುದನ್ನು :

" ನಾರುನರುಂಬೊಳಿಲ್ ಮಾಲಿರುಂಶೋಲೈ ನಂಬಿಕ್ಕು ।
ನಾನ್ ನೂರು ತಡಾವಿಲ್ ವೆಣ್ಣೈವಾಯ್ ನೇರ್ನ್ದು ಪರಾವೈತ್ತೇ ।
ನೂರುತಡಾನಿರೈಂಪ ವಿಕ್ಕಾರವಡಿಶಿಲ್‌ಶೊನ್ನೇನ್ ।
ಏರುತಿರುವುಡೈಯಾ ನಿನ್ರುವಂದಿಲ್ಕೈಕೊಳ್ಳುಂಕೊಲೋ ॥ "

ಗ್ರಹಿಸಿ, ಅದು ಪೂರ್ಣವಾಗದೆ ಇರುವ ವಿಚಾರವನ್ನು ತಮ್ಮ ಯೋಗ ದೃಷ್ಟಿಯಿಂದರಿತು, ಕೂಡಲೇ ಗೋದಾ ದೇವಿಯ ಪರವಾಗಿ, ತಿರುಮಾಲಿರುಂಶೋಲೈಗೆ ತೆರಳಿ, ಅಲ್ಲಿನ ಸುಂದರಬಾಹು ಸ್ವಾಮಿಗೆ ಒಂದು ನೂರು ದೊಡ್ಡ ಪಾತ್ರೆಗಳ ತುಂಬಾ ಬೆಣ್ಣೆ, ಒಂದು ನೂರು ದೊಡ್ಡ ಪಾತ್ರೆಗಳ ತುಂಬ ಅಕ್ಕಾರವಡಿಶಲನ್ನು (ಒಳ್ಳೆಯ ಸಕ್ಕರೆ ಪೊಂಗಲು) ಸಮರ್ಪಿಸಿ, ಹರಕೆಯನ್ನು ಪೂರ್ಣಗೊಳಿಸುತ್ತಾರೆ. ಆದ್ದರಿಂದ ಗೋದಾ ದೇವಿಯ ಹರಕೆಯನ್ನು ಆಕೆಯ ಪರವಾಗಿ ಪೂರ್ಣಗೊಳಿಸಿದರಾದುದರಿಂದ ಶಾಸ್ತ್ರೋಕ್ತವಾಗಿ ಆಕೆಗೆ ಅಣ್ಣನಾಗುತ್ತಾರೆಯಾದುದರಿಂದ **' ಗೋದಾಗ್ರಜ "** ಎನಿಸಿದರು. ಆ ಮಹಾ ಸುದಿನವೇ ಆಚಾರ್ಯರಿಗೆ ಶತ ಸಂವತ್ಸರಗಳು ಪೂರ್ಣವಾಗಿತ್ತು ಎಂಬುದೂ ಒಂದು ಅತಿಶಯವಾದುದು. ನಂತರ ಆಚಾರ್ಯರು ಶ್ರೀವಿಲ್ಲಿ ಪುತ್ತೂರಿಗೆ ತೆರಳಿ ಆಂಡಾಳಮ್ಮನವರನ್ನು ಸೇವಿಸಿದಾಗ ಮತ್ತು ಆಕೆಯ ಹರಕೆ ತೀರಿಸಿದುದನ್ನು ವರದಿ ಮಾಡಿದಾಗ, ತನ್ನ ಹರಕೆಯನ್ನು ತೀರಿಸಿದ ತನ್ನ ಅಣ್ಣ, **" ನಮ್ ಕೋಯಿಲಣ್ಣನ್ "** ಎಂಬುದಾಗಿ ಹೇಳಿ ತೀರ್ಥ ಪ್ರಸಾದಗಳನ್ನು ಕರುಣಿಸಿದಳು. ಆಚಾರ್ಯರು ತಮ್ಮ ಅರ್ಚಾ ಮೂರ್ತಿಯನ್ನು ತಮ್ಮ ಜನ್ಮಸ್ಥಳವಾದ ಶ್ರೀ ಪೆರಂಬೂದೂರುನಲ್ಲಿ ಸ್ಥಾಪಿಸಲು ಅನುಮತಿ ಇತ್ತರಲ್ಲದೆ ತಮ್ಮ ಶಕ್ತಿಯನ್ನು ಅದರಲ್ಲಿ ಕರುಣಿಸಿ, ಕಂದಾಡೆ ಆಂಡಾನ್ ಅವರಿಗೆ ಇತ್ತು ಪುಷ್ಯಮಾಸದ ಗುರುಪುಷ್ಯ ಯೋಗದಲ್ಲಿ ಪ್ರತಿಷ್ಠಾಪಿಸಲು ಆಣತಿಯಿತ್ತರು. ಒಂದುನೂರ ಇಪ್ಪತ್ತು ವರ್ಷಗಳು ಭೂಲೋಕದಲ್ಲಿ ವಾಸವಾಗಿದ್ದು ವಿಶಿಷ್ಟಾದ್ವೈತ ಸಿದ್ಧಾಂತಗಳನ್ನು ಸ್ಥಾಪಿಸಿ, ಶ್ರೀವೈಷ್ಣವ ಪಂಥವನ್ನು ಉದ್ಧಾರಮಾಡಿ, ಭಕ್ತಿ ಶರಣಾಗತಿಗಳನ್ನು ಬೋಧಿಸಿ, ಇಲ್ಲಿಗೆ ಇಹಲೋಕದ ಜೀವನವು ಸಾಕೆಂದರಿತು ಕ್ರಿ.ಶ. 1137, ಮಾಘ ಶುದ್ಧ ದಶಮಿ ಶನಿವಾರ ಮಧ್ಯಾಹ್ನ ಶ್ರೀರಂಗನಾಥನ ಗುಡಿಯೆಡೆಗೆ ತಲೆಯನ್ನಿಟ್ಟು, ತಮ್ಮ ಶಿರಸ್ಸನ್ನು ಎಂಬಾರರ ಮಡಿಲಿನಲ್ಲಿಯೂ, ತಮ್ಮ ಪಾದಗಳನ್ನು ವಡುಗ ನಂಬಿಗಳವರ ಮಡಿಲಿನಲ್ಲಿಯೂ ಇರಿಸಿ ಆಳವಂದಾರರ ದಿವ್ಯ ವಿಗ್ರಹವನ್ನು ಧ್ಯಾನಿಸುತ್ತಾ, ಪೆರಿಯ ನಂಬಿಗಳ ಪಾದುಕೆಗಳನ್ನು ಮುಂದಿರಿಸಿಕೊಂಡು, ಪರವಾಸುದೇವನನ್ನು ಧ್ಯಾನಿಸುತ್ತಾ ಯೋಗ ಧ್ಯಾನಪರವಶರಾಗಿರಲು ಆತ್ಮವು ಶಿರಃ ಕಪಾಲವನ್ನು ಭೇದಿಸಿ ದೇಹತ್ಯಾಗ ಮಾಡಿ ವೈಕುಂಠವನ್ನು ಸೇರಿತು.



    

ತಿರುವರಂಗತ್ತಮುದನಾರ್ ಕರುಣಿಸಿದ ದಿವ್ಯಪ್ರಬಂಧ

# ಶ್ರೀಮದ್ರಾಮಾನುಜ ನೂರಂತ್ಯಾದಿ

(ಇರಾಮಾನುಶ ನೂತ್ತಂದಾದಿ)

**ವೇದಪ್ಪಿರಾನ್ ಭಟ್ಟರ್ ಕರುಣಿಸಿದ ಮುಕ್ತಕ ಪದ್ಯ (ತನಿಯ್ನ್)**

ಮುನ್ನೈ ವಿನೈಯಗಲ ಮೂಂಗಿಕ್ಕುಡಿಯಮುದನ್,
ಪೊನ್ನಂಗಳಲ್ ಕಮಲಪ್ಪೋದಿರಂಡುಮ್, ಎನ್ನುಡೈಯ
ಶೆನ್ನಿಕ್ಕಣಿಯಾಗ ಚ್ಚೇರ್ತ್ತಿನೇನ್, ತೆನ್ಪುಲತ್ತಾ
ರ್ಕೆನ್ನುಕ್ಕಡವುಡೈ ಯೇನ್ ಯಾನ್.

ಮೂಂಗಿಲ್‌ಕ್ಕುಡಿ–ಮೂಂಗಿಲ್ ಎಂಬ ವಂಶದಲ್ಲಿ ಅವತರಿಸಿದ, ಅಮುದನ್– ತಿರುವರಂಗತ್ತ ಮುದನಾರ್ ಎಂಬುವರ, ಪೊನ್–ಪ್ರಾರ್ಥನಾ ಯೋಗ್ಯವಾದ, ಅಂ– ಸುಂದರವಾದ, ಕಳಲ್–ಶ್ರೀಪಾದಗಳು, ಕಮಲಪ್ಪೋದು–ಕಮಲ ಪುಷ್ಪಗಳಂತೆ, ಇರಂಡುಂ–ಇರಲಾಗಿ, ಎನ್ನುಡೈಯ–ನನ್ನ, ಶೆನ್ನಿಕ್ಕು–ಶಿರಸ್ಸಿಗೆ, ಅಣಿಯಾಗ–ಆಭರಣ ವಾಗಿರಲು, ಮುನ್ನೈ–ಅನಾದಿಕಾಲದಿಂದ ಸಂಚಯವಾಗಿರುವ, ವಿನೈ–ಪಾಪಗಳು, ಅಗಲ ನಾಶವಾಗಿ, ಶೇರ್ತ್ತಿನೇನ್–ಸೇರಿರುವೆ, ತೆನ್‌ಪುಲತ್ತಾರ್ಕು–ಯಮ ಕಿಂಕರರಿಗೆ, ಎನು ಕ್ಕು–ಏತಕ್ಕಾಗಿ, ಯಾನ್–ನಾನು, ಅಡವುಡೈಯೇನ್–ಭಯಪಡುವುದಿಲ್ಲ.

ಅನಾದಿ ಕಾಲದಿಂದ ಕೂಡಿಕೊಂಡು ಬಂದಿರುವ ನನ್ನ ಸಕಲ ಪಾಪ ಕರ್ಮಗಳು ನಶಿಸುವಂತೆ, ಮೂಂಗಿಲ್ ಕುಲದಲ್ಲಿ ಅವತರಿಸಿದ, ತಿರುವರಂಗತ್ತಮುದನಾರ್ ಅವರ ರಮಣೀಯವಾದ ಪಾದ ಕಮಲಗಳು, ನನ್ನ ಶಿರೋಭೂಷಣವಾಗಿರಲು ನನಗೆ ಆ ಯಮದೂತರ ಭಯವೆಂದಿಗೂ ಇರುವುದಿಲ್ಲ.

ನಯಂದರು ಪೇರಿನ್ಬಮೆಲ್ಲಾಮ್ ಪಳುದೆನ್ರು ನಣ್ಣಿನರ್‌ಪಾಲ್,
ಶಯಂದರು ಕೀರ್ತಿ ಯಿರಾಮಾನುಶಮುನಿ ತಾಳಿಣೈಮೇಲ್,
ಉಯರ್‌ನ್ದ ಗುಣತ್ತು ತ್ತಿರುವರಂಗತ್ತಮುದೋಂಗುಮನ್ಬಾಲ್,
ಇಯಮ್‌ಬುಮ್ ಕಲಿತ್ತುರೈಯಂದಾದಿ ಯೊದವಿಶೈ ನೆಂಜಮೇ.

ನೆಂಜಮೇ–ಎಲ್ಲೈ ಮನಸ್ಸೇ ! ನಯಮ್–ಶಬ್ದಸ್ಪರ್ಶಾದಿ ವಿಷಯಗಳಿಂದ, ತೆರು–ಅನರ್ಥವು ಒದಗುವ ಮೊದಲು, ಪೇರ್–(ತಿಳುವಳಿಕೆ ಇಲ್ಲದೆ) ತಿಳಿದಂತೆ ನಟಿಸುವ, ಇನ್ಬಮೆಲ್ಲಾಮ್–ಸುಖವೆಲ್ಲವನ್ನೂ, ಪಳದು ಎನ್ರು–ವ್ಯರ್ಥವೆಂದು ಆಲೋಚಿಸಿ, ನಣ್ಣಿನರ್‌ಪಾಲ್–ತಮ್ಮನ್ನು ಆಶ್ರಯಿಸಿದವರ ವಿಷಯದಲ್ಲಿ, ಶಯಮ್–ಭವಸಾಗರದ ನಿವಾರಣೆಗೆ, ತರು–ಮಾರ್ಗ ತೋರಿದ, ಕೀರ್ತಿ–ಯಶಸ್ಸನ್ನು ಹೊಂದಿದ, ಇರಾಮಾ ನುಶಮುನಿ–ಉಡ್ಯೆಯವರ, ತಾಳಿಣೈ–ಶ್ರೀಪಾದಗಳಲ್ಲಿ, ಉಯರ್‌ನ್ದಗುಣತ್ತು–ಪ್ರಾವಣ್ಯಾತಿಶಯಗಳಿಂದ, ತಿರುವರಂಗತ್ತಮುದು–ತಿರುವರಂಗತ್ತಮುದನಾರರು, ಓಂಗುಂ–ಬೆಳೆಸಿ, ಅನ್ಬಾಲ್–ಪ್ರೇಮದಿಂದ, ಇಯಂಬುಂ–ಹೇಳಿರುವಂತೆ, ಕಲಿತ್ತುರೈ–ಕಲಿತ್ತುರೈ ಎಂಬ ಛಂದಸ್ಸಿನ, ಅಂದಾದಿ–ಅಂತ್ಯಾದಿ ಕ್ರಮದ ಇರಾಮಾನುಶ ನೂತ್ತಂದಾದಿಯನ್ನು, ಓದ–ಅಧ್ಯಯನ ಮಾಡಲು, ಇಶೈ–ಸಮ್ಮತಿಸೋಣ.

ಓ ಮನಸ್ಸೇ ! ಲೋಕದಲ್ಲಿ ವಿಷಯ ಸುಖವು ಶಾಶ್ವತವಲ್ಲ ಮತ್ತು ನೀಚವಾದವು. ಅವಗಳನ್ನು ಬಿಟ್ಟು ತಮ್ಮನ್ನು ಆಶ್ರಯಿಸಿದವರನ್ನು ಭವಸಾಗರದಿಂದ ಬಿಡುಗಡೆ ಮಾಡಬಲ್ಲ ಪ್ರಸಿದ್ಧಿ ಹೊಂದಿದ, ಯತಿರಾಜರ ಶ್ರೀಪಾದ ದ್ವಯಗಳ ವಿಷಯವಾಗಿ ಪ್ರಾವಣ್ಯಾತಿಶಯದಿಂದ ಪ್ರತಿಪಾದಿಸಿರುವ " ಇರಾಮಾನುಶ ನೂತ್ತಂದಾದಿ " ಯನ್ನು ಭಕ್ತಿಯಿಂದ ಅಭ್ಯಾಸ ಮಾಡೋಣ, ಎಂದು ಮನಸ್ಸಿಗೆ ಪ್ರಚೋದಿಸುವರು.

ಮುಂದಿನ ಮುಕ್ತಕ ಪದ್ಯ (ತನಿಯ್ನ್) ತಿರುವರಂಗತ್ತಮುದನಾರ್ ಅವರೇ ಕರುಣಿಸಿರುವುದೆಂದೂ, ಇಲ್ಲವೇ ಅವರ ಅಭಿಪ್ರಾಯದಲ್ಲಿ ಪ್ರಾವಣ್ಯ ಉಳ್ಳ ಹಿರಿಯರು ಅನುಗ್ರಹಿಸಿರುವರು ಎಂಬುದಾಗಿ ವ್ಯಾಖ್ಯಾನಕಾರರು ಅಭಿಪ್ರಾಯ ಪಡುತ್ತಾರೆ.

ಶೊಲ್ಲಿನ್‌ತ್ತೊಗೈಕ್ಕೊಂಡುನದಡಿ ಪ್ಪೋದುಕ್ಕುತ್ತೊಂಡು ಶೆಯ್ಯುಮ್,
ನಲ್ಲನ್ಬರೇತ್ತು ಮುನ್ನಾಮ ಮೆಲ್ಲಾಮೆನ್ರನ್ ನಾವಿನುಳ್ಳೇ,
ಅಲ್ಲುಮ್ ಪಗಲುಮಮರುಂಬಡಿನಲ್‌ಗು – ಅರುಶಮಯ
ವೆಲ್ಲುಮ್‌ಪರಮ, ವಿರಾಮಾನುಶಾವಿದೆನ್ ವಿಣ್ಣಪ್ಪಮೇ.

ಶೊಲ್ಲಿನ್–ಶಬ್ದಗಳಲ್ಲಿ (ಮಾತುಗಳಲ್ಲಿ), ತೊಗೈಕ್ಕೊಂಡು–ಒಟ್ಟಿಗೆ ಸೇರಿಸಿ, (ಇಲ್ಲವೇ) ಶೊಲ್ಲಿನ್‌ತೊಗೈಕ್ಕೊಂಡು–ಅಷ್ಟೋತ್ತರ ಶತ ದಿವ್ಯ ಪಾಶುರಗಳಲ್ಲಿ ಹೇಳಬೇಕೆಂಬ ಸಂಕಲ್ಪವನ್ನು ಹೃದಯದಲ್ಲಿ ತುಂಬಿಕೊಂಡು, ಉನದು–ಆ ಯಾವ ಆಚಾರ್ಯರ, ಅಡಿಪ್ಪೋದುಕ್ಕು–ಶ್ರೀಪಾದಾರವಿಂದಗಳ ವಿಷಯವಾಗಿ, ತೊಂಡು–ತಿಳಿಸುವ ಕೈಂಕರ್ಯವನ್ನು, ಶೆಯ್ಯುಂ–ಮಾಡುವಂತೆ, ನಲ್ಲನ್ಬರ್–ಉತ್ತಮ ಪ್ರಾಮಾಣ್ಯದ ತಿರುವರಂಗತ್ತಮುದನಾರ್ ಅವರು, ಏತ್ತುಮ್–ಸ್ತೋತ್ರ ಮಾಡಲು,

ಉನ್ನಾನು ಮೆಲ್ಲಾವ್–ಆಚಾರ್ಯರ ತಿರುನಾಮವನ್ನು ಪೊಗಳುವ ನೂರೆಂಟು ಪಾಶುರಗಳನ್ನೂ, ಎನ್‌ದನ್–ನನ್ನ ಯಾವ, ನಾವಿನುಳ್ಳೇ–ನಾಲಿಗೆಯಲ್ಲಿ, ಅಲ್ಲುವ್ ಪಗಲುಂ–ರಾತ್ರಿ ಮತ್ತು ಹಗಲುಗಳಲ್ಲಿ, ಅರಂಬಡಿ–ಹೊಂದುವಂತೆ, ನಲ್ಗ–ಅನುಗ್ರಹಿಸಿ (ಎಂದು), ಅರುವಮಯುವ್–ಷಣ್ಮತಗಳನ್ನು, ವೆಲ್ಲುವ್–ಜಯಿಸಿದ, ಪರಮ–ಸರ್ವವಿಧದಲ್ಲೂ ಶ್ಲಾಘ್ಯರಾದ, ಇರಾಮಾನುಶಾ–ರಾಮಾನುಜ ಮುನಿಗಳೇ, ಇದು ಎನ್ನ ವಿಣ್ಣಪಂ–ಇದು ದಾಸನ ಬಿನ್ನಹವು.

ಷಣ್ಮತಗಳ ಪಂಡಿತೋತ್ತಮರನ್ನೆಲ್ಲಾ ಜಯಿಸಿದ ರಾಮಾನುಜಾಚಾರ್ಯ ಸ್ವಾಮೀ ! ತಮ್ಮ ಶ್ರೀಪಾದಾರವಿಂದಗಳ ವಿಷಯವಾಗಿ, ಅತ್ಯಂತ ಪ್ರಾವೀಣ್ಯತೆಯಿಂದ ಹೇಳುವ ಕೈಂಕರ್ಯಪರರಾದ ತಿರುವರಂಗತ್ತಮುದನಾರ್ ಅವರು ಪ್ರಸಾದಿಸಿರುವ ಒಂದು ನೂರ ಎಂಟು ಪಾಶುರಗಳುಳ್ಳ ಇರಾಮಾನುಶ ನೂತ್ತಂದಾದಿ ಪ್ರಬಂಧವನ್ನು, ದಾಸನ ನಾಲಿಗೆಯಿಂದ ಸ್ಪಷ್ಟವಾಗಿ ಅನುಸಂಧಾನ ಮಾಡಲು ಅನುಗ್ರಹಿಸಬೇಕೆಂದು ಬೇಡುವರು.

**– ಸೋಮಾಶಿಯಾಂಡಾಣ್ ಕರುಣಿಸಿದ ಮುಕ್ತಕ (ತನಿಯನ್) –**

ಇನಿಯೆನ್ ಕುಱೈನಮಕ್ಕೆಂಬೆರುಮಾನಾರ್ ತಿರುನಾಮತ್ತಿನಾಲ್,
ಮುನಿತನ್ದ ನೂತ್ತೆಟ್ಟುಚ್ಚಾವಿತ್ತಿರಿಯೆನ್ನುಂನುಣ್ಪೊರುಳ್ಳೈ,
ಕಲಿತಂದ ಶೆವ್‌ಶೊಲ್ ಕಲಿತ್ತುರೈಯನ್ದಾದಿ ಪಾಡಿತ್ತಂದಾನ್,
ಪುನಿದನ್ ತಿರುವರಂಗತ್ತಮುದಾಗಿಯ ಪುಣ್ಣಿಯನೇ.

ಮುನಿ–ಸೃಷ್ಟಿಯನ್ನು ಕುರಿತು ಮನನ ಮಾಡುವ ಸರ್ವೇಶ್ವರನು, ತನ್ದ–ಬ್ರಹ್ಮನಿಗೆ ಉಪದೇಶಿಸಿದ, ನೂತ್ತೆಟ್ಟು–ನೂರೆಂಟು ಬಾರಿ ಜಪಿಸಬೇಕಾದ, ಶಾವಿತ್ತಿರಿಯೆನ್ನುಮ್–ಸಾವಿತ್ರಿ ಎನಿಸಿಕೊಳ್ಳುವ ವೇದಮಾತಾ ಗಾಯತ್ರಿಯ, ನುಣ್–ಸೂಕ್ಷ್ಮವಾದ, ಪೊರುಳ್ಳೈ–ಅರ್ಥವನ್ನು, ಎಂಬೆರುಮಾನಾರ್–ಯತಿರಾಜರ, ತಿರುನಾಮತ್ತಾಲ್–ಪವಿತ್ರ ನಾಮಗಳಲ್ಲಿ, ಕಲಿ–ಶಕ್ತಿಯನ್ನು, ತನ್ದ–ಕೊಟ್ಟಂತಹ, ಶೆವ್‌ಶೊಲ್–ಕಿವಿಗೆ ಇಂಪಾದ ಶಬ್ದಗಳುಳ್ಳ, ಕಲಿತ್ತುರೈ–ಕಲಿತ್ತುರೈ ಎಂಬ ಛಂದಸ್ಸಿನಲ್ಲಿ ರಚಿಸಿರುವ, ಅಂತಾದಿ–ಆದಿ ಮತ್ತು ಅಂತ್ಯ ಪದಗಳು ಒಂದೇ ಆಗಿರುವ ಪಾಶುರಗಳುಳ್ಳ ಇರಾಮಾನುಶ ನೂತ್ತಂದಾದಿಯನ್ನು, ಪಾಡಿ–ಅನುಭವಿಸಿ ಹಾಡಿದ, ಪುನಿದನ್–ಪರಿಶುದ್ಧರಾದ, ಪುಣ್ಯವಂತರಾದ, ತಿರುವರಂಗತ್ತ ಮುದು–ತಿರುವ ರಂಗತ್ತ ಮುದನಾರ್ ಅವರು, ಆಗಿಯ–ಆಗಿರುವಂತೆ, ಪುಣ್ಣಿಯನ್–ಧಾರ್ಮಿಕರು, ತನ್ದಾನ್–ಕೊಟ್ಟಿರುವರು, ಇನಿ–ಇನ್ನುಮೇಲೆ, ನಮಕ್ಕು–ನಮಗೆ, ಕುಱೈಎನ್–ಕೊರತೆಯೇನಿದೆ ?

ಸರ್ವೇಶ್ವರನು ಬ್ರಹ್ಮನನ್ನು ಸೃಷ್ಟಿಸಿ, ಆ ಬ್ರಹ್ಮನಿಗೆ ಪ್ರಣವದಿಂದ ಕೂಡಿದ ಗಾಯತ್ರಿ ಮಂತ್ರದ ಸಾರಾಂಶವನ್ನು ಕರುಣಿಸಿದಂತೆ ಮತ್ತು ಸತ್ವವನ್ನಾಗಿ ಉಳ್ಳ, ಧಾರ್ಮಿಕರನ್ನು ಪಾವನಗೊಳಿಸುವ ಶ್ರೀಮದ್ರಾಮಾನುಜ ನೂರಂತ್ಯಾದಿ (ಇರಾಮಾನುಶ ನೂತ್ತಂದಾದಿ) ಎಂಬ ದಿವ್ಯಪ್ರಬಂಧವನ್ನು, ಪರಿಶುದ್ಧಾತ್ಮಕರಾದ ತಿರುವರಂಗತ್ತ ಅಮುದನಾರ್ ಅವರು ಕರುಣಿಸಿರುವರು. ಇದನ್ನು ಅನುಸಂಧಾನ ಮಾಡುವ ನಮಗೆ ಇಹಲೋಕದಲ್ಲಿ ಏನು ಕೊರತೆ ಇದೆ ?



# ಅವತಾರಿಕೆ

ಸಕಲ ಶಾಸ್ತ್ರ ಸಂಗ್ರಹವಾದ, ತಿರುಮಂತ್ರದ ತಾತ್ಪರ್ಯ ಸತ್ವವಾದ, ಭಗವಂತನ ನಿರ್ಹೇತುಕ ಕೃಪಾಲಬ್ಧ ಪರಿಶುದ್ಧ ಜ್ಞಾನವಂತರಾದ, ಆಳ್ವಾರರ ಯಾವ ದಿವ್ಯ ಪ್ರಬಂಧ ಸಾರಾರ್ಥವನ್ನು, ಪರಮ ಕಾರುಣಿಕರಾದ ನಮ್ಮಾಳ್ವಾರ್ ಅವರ ಪರಿಪೂರ್ಣ ಕಟಾಕ್ಷಕ್ಕೆ ಪಾತ್ರರಾದ ಮಧುರ ಕವಿ ಆಳ್ವಾರರಿಗೆ ಅನುಗ್ರಹಿಸಿದರು. ಅದೇ ರೀತಿಯಲ್ಲಿ ಉಪದೇಶ ಪರಂಪರೆಯಿಂದ ಪ್ರಾಪ್ತವಾಗುವ ಪರಮ ರಹಸ್ಯವಾದ, ಚರಮಪರ್ವನಿಷ್ಠಾಪ್ರಕಾರವನ್ನು, ಉಡೈಯವರು (ರಾಮಾನುಜರು), ತಿರುವರಂಗತ್ತ ಮುದನಾರ್ ಅವರಿಗೆ, ಕೇವಲ ಕೃಪೆ ಮಾತ್ರದಿಂದ ಕೂರತ್ತಾಳ್ವಾರ್ ಅವರ ತಿರುವಡಿ ಗಳನ್ನು ಆಶ್ರಯಿಸಲು ಆಣತಿಯಿತ್ತು, ಅವರ ಮೂಲಕ ಪರಮ ರಹಸ್ಯಾರ್ಥಗಳನ್ನು ಕರುಣಿಸಿದರು. ಆಗ ಆ ತಿರುವ ರಂಗತ್ತ ಮುದನಾರ್ ಅವರು, ಕೂರತ್ತಾಳ್ವಾರ್ ಅವರನ್ನು ಆಶ್ರಯಿಸಿ ಕೃತಾರ್ಥರಾದರು. ಆದರೂ ಅವರ ಭಕ್ತಿ ಶರಣಾಗತಿಯು ಶ್ರೀಮದ್ರಾಮಾನುಜಾಚಾರ್ಯರಲ್ಲಿತ್ತು. ಆಚಾರ್ಯರ ಪಾದನಿಷ್ಠಾಗರಿಷ್ಠರಾಗಿ ಅತಿಶಯ ಪ್ರೇಮದಿಂದ ಅನುಸಂಧಾನಮಾಡುತ್ತಾ ಅನುಭವಿಸಿದರು. ಈ ರೀತಿ ರಾಮಾನುಜರ ದಿವ್ಯಚರಣಗಳನ್ನು ಅನುಭವಿಸುತ್ತಿದ್ದ ತಿರುವರಂಗತ್ತ ಮುದನಾರ್ ಅವರು, ತಾವು ಅನುಭವಿಸಿದ ಅರ್ಥಜ್ಞಾನವನ್ನು ಚೇತನರಿಗೆ ಸುಲಭವಾಗುವಂತೆ ಮಾಡಲು ಸಂಕಲ್ಪಿಸಿದರು. ಅದಕ್ಕೆ ಮೊದಲು ನಮ್ಮಾಳ್ವಾರರ ಪ್ರಥಮ ಶಿಷ್ಯರಾದ ಮಧುರಕವಿ ಆಳ್ವಾರ್‌ರ ಸ್ವನಿಷ್ಠಾನುಸಂಧಾನ ರೂಪವಾಗಿಯೂ, ಉಜ್ಜೀವನಾರ್ಥಕ್ಕಾಗಿ, ಪರೋಪದೇಶರೂಪವಾಗಿಯೂ, ಸಕಲ ಚೇತನರಿಗೋಸ್ಕರ ಗ್ರಂಥರೂಪದಲ್ಲಿ ದ್ರಾವಿಡ ವೇದಗಳಾದ ದಿವ್ಯಪ್ರಬಂಧಗಳನ್ನು ಪ್ರಸಾದಿಸಿದರಷ್ಟೆ! ಅದೇ ರೀತಿ ಆಚಾರ್ಯಾಭಿಮಾನ ನಿಷ್ಠರಾದ ಎಲ್ಲರೂ ತಿಳಿದುಕೊಳ್ಳಬೇಕಾದ ರಹಸ್ಯಾರ್ಥಗಳನ್ನೆಲ್ಲಾ, ಸ್ವರೂಪೋ ಪಾಯ ಪುರುಷಾರ್ಥ ಯಥಾತ್ಮ್ಯ ಪ್ರಕಾಶವಾಗಿಸಲು, ಈ ಗ್ರಂಥದ ಮೂಲಕ ಸವಿಸ್ತಾರವಾಗಿ ಪ್ರಕಾಶಿಸಿದ್ದಾರೆ. ಬ್ರಾಹ್ಮಣ್ಯವು ಸಿದ್ಧಿಸಬೇಕಾದರೆ, ಗಾಯತ್ರಿ ಮಂತ್ರವನ್ನು ಪ್ರತಿನಿತ್ಯವೂ ಜಪಿಸಲೇ ಬೇಕೆಂಬುದು ಸತ್ಯವಾದಂತೆ, ಶ್ರೀವೈಷ್ಣವತ್ವವು ಸಿದ್ಧಿಸಬೇಕಾದರೆ ಪ್ರಸನ್ನ ಗಾಯತ್ರಿ ಎಂಬ ಈ ಇರಾಮಾನುಶ ನೂತ್ತಂದಾದಿ (ಶ್ರೀಮದ್ರಾಮಾನುಜ ನೂರಂತ್ಯಾದಿ)ಯನ್ನು ನಿತ್ಯಾನುಸಂಧಾನ ಮಾಡಬೇಕು ಎಂದು ನಮ್ಮ ಪೂರ್ವಾಚಾರ್ಯರು ಪ್ರಸಾದಿಸಿರುವರು. ರಾಮಾನುಜಾಚಾರ್ಯರ ಶ್ರೀಪಾದಗಳಲ್ಲಿ ಪ್ರಾವಣ್ಯ ಪಡೆದವರಿಗೆ ನಿತ್ಯಾನುಸಂಧಾನ ಮಾಡಲೇಬೇಕೆಂಬುದ ಕ್ಕಾಗಿಯೇ ಪ್ರತಿ ಪಾಶುರದಲ್ಲಿಯೂ ರಾಮಾನುಜರ ತಿರುನಾಮವನ್ನು ಸೇರಿಸುತ್ತಾ ನೂರೆಂಟು ಪಾಶುರಗಳ ಈ ದಿವ್ಯ ಪ್ರಬಂಧವನ್ನು ಪುಣ್ಯಾತ್ಮರಾದ ತಿರುವರಂಗತ್ತ ಮುದನಾರ್ ಅವರು ಕರುಣಿಸಿರುವರು.

॥ ಶ್ರೀಮತೇ ರಾಮಾನುಜಾಯ ನಮಃ ॥

॥ ಶ್ರೀಯೈ ನಮಃ ಶ್ರೀಧರಾಯ ನಮಃ ॥

    

# ಶ್ರೀಮದ್ರಾಮಾನುಜ ನೂರಂತ್ಯಾದಿ

**(ಇರಾಮಾನುಶ ನೂತ್ತಂದಾದಿ)**

ಈ ಮೊದಲ ಪಾಶುರದಲ್ಲಿ ತಿರುವರಂಗತ್ತ ಮುದನಾರ್ ಅವರು, ತಮ್ಮ ಹೃದಯವನ್ನು ಕುರಿತು, ರಾಮಾನುಜಾಚಾರ್ಯರನ್ನು, ಅವರ ಶ್ರೀಪಾದಗಳನ್ನು ಆಶ್ರಯಿಸಿ ಪುನೀತನಾಗು ಎಂದು ಉಪದೇಶಿಸುತ್ತಿರುವರು.

**ಪೂಮನ್ನುಮಾದು ಪೊರುನ್ದಿಯ ಮಾರ್ಪನ್, ಪುಗಳ್ ಮಲಿನ್ದ**
**ಪಾಮನ್ನು ಮಾರನಡಿಪಣಿನ್ದುಯ್‌ನ್ದವನ್, ಪಲ್‌ಕಲೈಯೋರ್**
**ತಾಮ್‌ಮನ್ನವನ್ದ ವಿರಾಮಾನುಶನ್ ಚರಣಾರವಿಂದಮ್**
**ನಾಮ್‌ಮನ್ನಿವಾಳ, ನೆಂಗೇಶೊಲ್ಲುವೋಮವನ್ ನಾಮಂಗಳೇ.** 1

ಪೂ–ತಾವರೆ ಹೂವನ್ನು, ಮನ್ನು–ವಾಸವಾಗಿ ಉಳ್ಳ, ಮಾದು–ಶ್ರೀಮಹಾಲಕ್ಷ್ಮಿಯು, ಪೊರುನ್ದಿಯ–ನಿತ್ಯ ವಾಸ ಮಾಡುವಂತಹ, ಮಾರ್ಪನ್–ವಕ್ಷಸ್ಥಳವನ್ನು ಉಳ್ಳ ಯಾವ ಶ್ರಿಯಃ ಪತಿಯು, ಪುಗಳ್–ಕಲ್ಯಾಣ ಗುಣಗಳಲ್ಲಿ, ಮಲಿನ್ದ–ತುಂಬಿಕೊಂಡಿರುವ, ಪಾ–ತಿರುವಾಯ್ಮೊಳಿ ಮುಂತಾದ ದಿವ್ಯ ಪ್ರಬಂಧ ಪಾಶುರಗಳಲ್ಲಿ, ಮನ್ನು–ಸ್ಥಿರವಾಗಿವುಳ್ಳ ಹೃದಯವನ್ನು ಹೊಂದಿರುವ, ಮಾರರ್–ನಮ್ಮಾಳ್ವಾರರ, ಅಡಿ–ಶ್ರೀಪಾದಗಳನ್ನು, ಪಣಿನ್ದು–ಆಶ್ರಯಿಸಿ, ಉಯ್‌ನ್ದವನ್–ಉಜ್ಜೀವಿಸಿದವನಾಗಿ, ಪಲ್–ಅನೇಕವಾದ, ಕಲೈಯಾರ್–ಶಾಸ್ತ್ರಗಳ (ಸಕಲಶಾಸ್ತ್ರ ಸಾರಾಂಶಗಳನ್ನು ತತ್ವವಾಗಿ ಗುರಿಮಾಡಿ ಸಾಧಿಸಿದಂತಹ), ಮನ್ನ–ವಾಸ್ತವಾರ್ಥ ಜ್ಞಾನದಿಂದ ಚೆನ್ನಾಗಿ ಪ್ರತಿಷ್ಠಾಪಿಸುವುದಕ್ಕೋಸ್ಕರ, ವನ್ದು–ಪರಮ ಪದದಿಂದ ಸರ್ವೇಶ್ವರನ ಆಣತಿಯಂತೆ ಬಂದು ಅವತರಿಸಿದ, ಇರಾಮಾನುಶರ್–ರಾಮಾನುಜಾಚಾರ್ಯರ, ಚರಣಾರವಿಂದಂ–ಶ್ರೀಪಾದಗಳನ್ನು, ನಾಮ್–ನಾವು, ಪೊಂದಿ–ಹೊಂದಿ, ವಾಳ–ಸುಖಿಸುವಂತೆ, ನೆಂಗೇ–ಓ ಮನಸ್ಸೇ! ಅವನ್–ಆ ಆಚಾರ್ಯರ ಯಾವ, ನಾಮಂಗಳ್–ಭೋಗ್ಯವಾದಂತಹ ತಿರುನಾಮಗಳನ್ನು, ಶೊಲ್ಲುವೋಮ್–ಅನುಸಂಧಾನ ಮಾಡೋಣ.

ಕಮಲ ಪುಷ್ಪದಲ್ಲಿ ಜನಿಸಿ, ಸದಾ ತಾವರೆಯಲ್ಲಿ ವಾಸವಾಗಿದ್ದು, ಭಗವಂತನ ವಕ್ಷಸ್ಥಲವನ್ನೇ ನಿತ್ಯವಾಸವನ್ನಾಗಿಸಿಕೊಂಡಿರುವ ಜಗನ್ಮಾತೆ ಮಹಾಲಕ್ಷ್ಮಿಯ ಪತಿಯಾದ, ಶ್ರೀಮನ್ನಾರಾಯಣನ, ಪರತತ್ವ, ಸೌಲಭ್ಯ, ಸೌಶೀಲ್ಯ, ಸೌಹಾರ್ದ್ರ, ವಾತ್ಸಲ್ಯಾದಿ ಕಲ್ಯಾಣ ಗುಣಗಳನ್ನು ಪ್ರತಿಪಾದಿಸಲು ರಚಿಸಿರುವ, ತನ್ಮೂಲಕ ಶ್ರಿಯಃ ಪತಿಯನ್ನು ಅನುಭವಿಸಲು ಸಂತ ನಮ್ಮಾಳ್ವಾರರ ತಿರುವಡಿಗಳನ್ನು ಆಶ್ರಯಿಸಿ ಉಜ್ಜೀವಿಸಿದ, ಸಕಲಶಾಸ್ತ್ರ ಪಾರೀಣರಾದ, ಶ್ರಿಯಃ ಪತಿಯ ಅಣತಿಯಂತೆ- ಚೇತನ ರನ್ನು ಉದ್ಧಾರಮಾಡಲು ಭೂಲೋಕದಲ್ಲಿ ಅವತರಿಸಿದ ಯಾವ ಆದಿಶೇಷನು ರಾಮಾನುಜಾಚಾರ್ಯರಾಗಿರುವಾಗ, ಅವರ ಶ್ರೀಪಾದಾಶ್ರಯದಿಂದ ನಮ್ಮ ಅನಾದಿ ಕಾಲದಿಂದ ಬದ್ಧವಾದ ಸಂಸಾರ ಕ್ಲೇಶಗಳಿಂದ ಬಿಡುಗಡೆ ಹೊಂದಲು, ನಾವು ಅವರನ್ನು ಆಶ್ರಯಿಸಿ ಅವರ ತಿರುನಾಮವೇ ಸಕಲ ವಿಧ ಭೋಗ್ಯವೆಂದರಿತು, ಓ ಮನಸ್ಸೇ ! ಉದ್ಧಾರವಾಗೋಣ.

ಈ ಪಾಶುರದಲ್ಲಿ ತಮ್ಮ ಹೃದಯ ಪರಿವರ್ತನೆಯಾದುದನ್ನೂ, ಉತ್ತಮ ಪುರುಷಾರ್ಥ ಲಭಿಸಿರುವುದನ್ನೂ ಕಂಡು ತಿರುವರಂಗತ್ತ ಮುದನಾರ್ ಅವರು ಆಶ್ಚರ್ಯಪಡುತ್ತಾರೆ.

**ಕಳ್ಳಾರ್ ಪೊಳಿಲ್ ತೆನ್ನರಂಗನ್, ಕಮಲಪ್ಪದಂಗಳ್ ನೆಂಜಿಲ್**
**ಕೊಳ್ಳಾಮನಿಶರ್ರೈನೀಂಗಿ, ಕ್ಕುರೈಯಪ್ಪಿರಾನಡಿಕ್ಕೀಳ್**
**ವಿಳ್ಳಾದವನ್ಬನಿರಾಮಾನುಶನ್ ಮಿಕ್ಕಶೀಲಮಲ್ಲಾಲ್**
**ಉಳ್ಳಾದೆನ್ನೆಂಗು, ನ್ರಱಿಯೇನೆನಕ್ಕುತ್ತ ಪೇಱಿಯಲ್ಲೇ.** 2

ಕಳ್‌ಆರ್–ಜೇನು ತುಂಬಿರುವ, ಪೊಳಿಲ್–ತೋಟಗಳಿಂದ, ತೆನ್–ಅಂದವಾದ, ಅರಂಗನ್–ಶ್ರೀರಂಗನಾಥನ, ಕಮಲಮ್–ವಿಕಸಿಸುತ್ತಿರುವ ತಾವರೆ ಪುಷ್ಪದ ರೀತಿಯ, ಪದಂಗಳ್–ಶ್ರೀಪಾದಗಳನ್ನು, ನೆಂಗಿಲ್–ತಮ್ಮ ಹೃದಯದಲ್ಲಿ, ಕೊಳ್ಳಾ–ಸದಾ ಇರಿಸಿಕೊಂಡ, ಮನಿಶರ್ರೈ–ಮನುಷ್ಯರನ್ನು, ನೀಂಗಿ–ದೂರವಾಗಿಸಿ, ಕುರೈಯಲ್– ತಿರುಕ್ಕುರೈಯಲೂರಿನಲ್ಲಿ ಅವತರಿಸಿದ, ಪಿರಾನ್–ತಿರುಮಂಗೈ ಆಳ್ವಾರರ, ಅಡಿಕ್ಕೀಳ್– ತಿರುವಡಿಗಳನ್ನು ಎಂದೆಂದೂ, ವಿಳ್ಳಾದ–ಬಿಡದೆ ಇರುವ, ಅನ್ಬನ್–ಸ್ನೇಹವನ್ನು ಪಡೆದಿರುವ, ಇರಾಮಾನುಶನ್–ರಾಮಾನುಜಾಚಾರ್ಯರ, ಮಿಕ್ಕ–ಸರ್ವಾಧಿಕವಾದ, ಶೀಲಮ್ ಅಲ್ಲಾಲ್–ಶೀಲಗುಣಗಳಿಂದ, ಎನ್ನೆಂಗು–ನನ್ನ ತುಂಬಿರುವ ಹೃದಯವು, ಒನ್ರು–ಬೇರೆ ಯಾವುದನ್ನೂ, ಉಳ್ಳಾದು–ಸ್ಮರಿಸದು, ಎನ್ನುಕ್ಕು–ನನಗೆ, ಉತ್ತ– ಸಿದ್ಧಿಸಿರುವ, ಪೇಱ್–(ಸಕಲೋಪಾಯಗಳಿಗಿಂತ) ಉತ್ತಮವಾದ, ಒನ್ರು–ಒಂದು, ಇಯಲ್ಪು–ವಿಶೇಷವು, ಅಱಿಯೇನ್–ಲಭಿಸಿದ ವಿಧವನ್ನು ತಿಳಿಯಲಾರದವ ನಾದೆನಲ್ಲಾ ಏನಾಶ್ಚರ್ಯ !

ಪುಷ್ಪಮಾಲಿಕೆಗಳಂತೆ ಉಭಯ ಪಾರ್ಶ್ವಗಳಲ್ಲಿ ಕಾವೇರಿ ಪ್ರವಹಿಸುತ್ತಿರುವಾಗ್ಯೆ, ಮಧು ಸುಗಂಧ ಭರಿತವಾದ ಪುಷ್ಪಗಳುಳ್ಳ ಉದ್ಯಾನವನಗಳಿಂದ ಆವರಿಸಲ್ಪಟ್ಟಿರುವ ರಮಣೀಯವಾಗಿರುವ ಸರ್ವೇಶ್ವರನಿಗೆ ಭೋಗಮಂಟಪವೆನಿಸಿರುವ, ಶ್ರೀರಂಗ ಕ್ಷೇತ್ರದಲ್ಲಿ ಅತ್ಯಂತ ಸಂತೋಷದಿಂದ ಪವಡಿಸಿರುವ ಶ್ರೀರಂಗನಾಥನ ಯಾವ ಪಾದಾರವಿಂದಗಳನ್ನು ಸೇವಿಸಿ, ಅನೇಕ ಜನ್ಮಗಳ ಪಾಪ ಪರಿಹರಿಸಿಕೊಂಡು ಸಂಸಾರ ಬಂಧಗಳನ್ನು ತೊರೆದುಕೊಳ್ಳಲು, ಪೆರಿಯ ತಿರುಮೊಳಿ ಮೊದಲಾದ ದಿವ್ಯಪ್ರಬಂಧ ಗಳನ್ನು ರಚಿಸಿ, ಚೇತನರ ಉದ್ಧಾರಕ್ಕೆ ನೆರವಾದ, ಶ್ರೀರಂಗಕ್ಷೇತ್ರದಲ್ಲಿ ಪ್ರಾಕಾರಾದಿ ಗಳನ್ನು ನಿರ್ಮಿಸಿ, ಏಕಾದಶಿ ತಿರುವಧ್ಯಯನೋತ್ಸವವನ್ನು ನಡೆಸಿದ, ಶೈವರ ವಾದವನ್ನು ಧ್ವಂಸಮಾಡಿದ ತಿರುಮಂಗೈ ಆಳ್ವಾರರ ತಿರುವಡಿಗಳಲ್ಲಿ ಅತ್ಯಂತ ಪ್ರಾವಣ್ಯವನ್ನು ಹೊಂದಿದ ಭಾಗವತ ಶೇಷತ್ವದಲ್ಲಿ ನಂಬಿಕೆಯುಳ್ಳ, ಮಹಾನುಭಾವ ರಾದರೂ ನನ್ನಂತಹ ಮಂದಮತಿಗಳೊಡನೆಯೂ ಕಲೆತುಯಿದ್ದ, ಆ ಯತಿರಾಜರ ಸರ್ವಾಧಿಕವಾದ ಶೀಲಗುಣವೇ ನನ್ನ ಹೃದಯವಾಗಿದೆ. ಅದು ಬೇರೆ ಯಾವುದನ್ನೂ ಸ್ಮರಿಸದು. ನನಗೆ ಸಿದ್ಧಿಸಿದ ಉತ್ತಮವಾದ ಒಂದು ವಿಲಕ್ಷಣವಾದ ಉಪಾಯ ವಿಶೇಷವು ನನಗೆ ತಿಳಿಯದಾಗಿದೆ, ಏನಾಶ್ಚರ್ಯವು ! ಎಂದು ಹೇಳುತ್ತಾರೆ.

ಮೂರನೆಯ ಈ ಪಾಶುರದಲ್ಲಿ ಎಂಬೆರುಮಾನಾರರ ತಿರುವಡಿಗಳ ಸಂಬಂಧ ಹೊಂದಿರುವ ಭಾಗವತೋತ್ತಮರನ್ನು ಆಶ್ರಯಿಸಲು ಸಹಾಯಕವಾದ ತಮ್ಮ ಮನಸ್ಸನ್ನು ಶ್ಲಾಘಿಸುವರು.

**ಪೇರಿಯಲ್ ನೆಂಗೇಯಡಿಪಣಿನ್ದೇನುನ್ನೈ, ಪ್ಪೇಯ್ ಪ್ಪಿರವಿ**
**ಪ್ಪೂರಿಯರೊಡುಳ್ಳ ಶುತ್ತಮ್ ಪುಲರ್ತ್ತಿ, ಪ್ಪೊರುವರುಮ್ ಶೀರ್**
**ಆರಿಯನ್ ಶೆಮ್ಮೈಯಿರಾಮಾನುಶಮುನಿಕ್ಕನ್ಬುಶೆಯ್ಯುಮ್**
**ಶೀರಿಯ ಪೇರುಡೈಯೊರ್, ಅಡಿಕ್ಕೀಳೆನ್ನೈ ಚ್ಚೇರ್ತದರ್ಕೇ.** 3

ಪೇರ್–ಗಂಭೀರವಾದ, ಇಯಲ್–ಸ್ವಭಾವವುಳ್ಳ, ನೆಂಗೇ–ಓ ಮನಸ್ಸೇ !, ಪೇಯ್–ನೀಚವಾದ, ಪಿರವಿ–ಜನ್ಮದಿಂದ, ಪೂರಿಯರೊಡು–ಅಹಂಕಾರಾದಿ ದೋಷ ಯುಕ್ತ ನೀಚರೊಡನೆ, ಉಳ್ಳ–ಒದಗಿದ, ಶುತ್ತಮ್–ಸಂಬಂಧವನ್ನು, ಪುಲರ್ತಿ–ಬಿಟ್ಟು, ಪೊರುವರುಮ್–ಸಾಟಿ ಇಲ್ಲದ, ಶೀರ್–ಶುಭಗುಣಗಳನ್ನು ಹೊಂದಿರುವ, ಆರಿಯನ್–ಸರ್ವಜ್ಞರಾದ ವಿದ್ವಾಂಸರನ್ನು, ಶೆಮ್ಮೈ–ಆಶ್ರಿತರು ಎಂತಹವರೇ ಆದರೂ ಪರಿವರ್ತಿ ಸುವ ಋಜು ಸ್ವಭಾವವನ್ನು ಹೊಂದಿದ,ಇರಾಮಾನುಶಮುನಿಕ್ಕು–ಎಂಬೆರುಮಾನಾರರ ವಿಷಯದಲ್ಲಿ, ಅನ್ಬುಶೆಯ್ಯುಮ್–ಅತ್ಯಂತ ಪ್ರೀತಿ ಮಾಡುವಂತಹ, ಶೀರಿಯ–ಶ್ಲಾಘ್ಯವಾದ, ಪೇರುಉಡೈಯಾರ್–ಪುರುಷಾರ್ಥ ಪಡೆದ ಕೂರತ್ತಾಳ್ವಾರ್

ಮೊದಲಾದ ಭಾಗವತರ ಯಾವ, ಅಡಿಕ್ಕೀಳ್–ಶ್ರೀಪಾದಗಳಲ್ಲಿ, ಎನ್ನೈ–ನನ್ನನ್ನು, ಶೇರ್ತದರ್ಕು–ಸೇರಿಸಿದ ಈ ಮಹೋಪಕಾರಕ್ಕೆ, ಉನ್ನೈ–ನಿನ್ನನ್ನು ಕುರಿತು, ಅಡಿಪಣಿನ್ದೇನ್–ನಮಸ್ಕರಿಸುತ್ತಿರುವೆನು.

ಉಡ್ಡೆಯವರ ಕಲ್ಯಾಣ ಗುಣಗಳಿಗೆ ಮಾರುಹೋಗಿ ಗಂಭೀರ ಭಾವದಿಂದಿರುವ ಓ ಮನಸ್ಸೇ ! ನೀಚ ಜನ್ಮದವರ, ಅಹಂಕಾರ ಸ್ವಭಾವವುಳ್ಳ ದೋಷಯುಕ್ತರ ಸಂಸರ್ಗವನ್ನು ತೊರೆದು, ಸಮಸ್ತ ಕಲ್ಯಾಣ ಗುಣಾತ್ಮರಾದ, ಸಕಲ ಶಾಸ್ತ್ರಗಳಲ್ಲಿ ಅಗ್ರಗಣ್ಯರಾದ, ಆಶ್ರಿತರು ಕುತ್ಸಿತರಾದರೂ ಸನ್ಮಾರ್ಗಿಗಳನ್ನಾಗಿಸುವ ಋಜು ಸ್ವಭಾವ ಹೊಂದಿರುವ ಯತಿರಾಜರ ವಿಷಯದಲ್ಲಿ ಪ್ರಾವಣ್ಯವೇ ಶ್ಲಾಘ್ಯವಾದ ಪುರುಷಾರ್ಥ ಎಂದು ನಂಬಿರುವ, ಕೂರತ್ತಾಳ್ವಾನ್ ಮೊದಲಾದ ಭಾಗವತೋತ್ತಮರುಗಳ ಶ್ರೀಪಾದಗಳಲ್ಲಿ ಸೇರಿಸಿದ ಈ ಮಹೋಪಕಾರಕ್ಕಾಗಿ ನಮಸ್ಕರಿಸುತ್ತಿರುವೆನು.

ಈ ಪಾಶುರದಲ್ಲಿ ದುರ್ವಾಸನಾ ಬಲದಿಂದ ಮನಸ್ಸು ಸದ್ವಿಷಯದಿಂದ ತಪ್ಪ ಕೂಡದೆಂದೂ, ತಮ್ಮ ನಿಷ್ಠೆಗೆ ಹಾನಿಯಾಗದಿರಲೆಂದು, ಎಂಬೆರುಮಾನರು ತಾವೇ ನಿರ್ಹೇತುಕವಾಗಿ ನನ್ನನ್ನು ಅಂಗೀಕರಿಸಿರುವರು ಅದರಿಂದ ನನಗೆ ಯಾವ ಹಾನಿಯೂ ಬಾರದು ಎನ್ನುತ್ತಿದ್ದಾರೆ.

**ಎನ್ನೈಪ್ಪುವಿಯಿಲೊರು ಪೊರುಳಾಕ್ಕಿ, ಮರುಳ್ ಶುರನ್ದ**
**ಮುನ್ನೈಪ್ಪಳವಿನೈ ವೇರರುತ್ತು, ಊಳಿಮುದಲ್ವನೈಯೇ**
**ಪನ್ನಪ್ಪಣಿತ್ತವಿರಾಮಾನುಶನ್ ಪರನ್ ಪಾದಮುಮೆನ್**
**ಶೆನ್ನಿಲ್‌ತರಿಕ್ಕವೈತ್ತಾನ್, ಎನಕ್ಕೇದುಮ್ ಶಿದೈವಿಲ್ಲೈಯೇ. 4**

ಊಳಿ–ಕಾಲಕ್ರಮದಲ್ಲಿ ತಿಳಿಯಬೇಕಾದ ಸಕಲ ವಸ್ತುಗಳಿಗೂ, ಮುದಲ್ವನೈಯೇ–ಕಾರಣಭೂತನಾದ ಸರ್ವೇಶ್ವರನನ್ನೇ, ಪನ್ನ–ಎಲ್ಲರೂ ವಿವೇಕ ವಂತರಾಗಿ ಅನುಸಂಧಾನ ಮಾಡಲು ಕಾರಣರಾದ, ಪಣಿತ್ತ– ಶ್ರೀ ಭಾಷ್ಯವನ್ನು ಕರುಣಿಸಿದ, ಪರನ್–ಸರ್ವೋತ್ತಮರಾದ, ಇರಾಮಾನುಶನ್–ಯತಿರಾಜರು, ಎನ್ನೈ–ನನ್ನನ್ನು, ಪುವಿಯಿಲ್–ಈ ಭೂಮಿಯಲ್ಲಿ, ಒರು ಪೊರುಳಾಕ್ಕಿ–ಒಂದು ವಸ್ತುವಾಗುವಂತೆ ಮಾಡಿ, ಮರುಳ್–ಅಜ್ಞಾನದಿಂದ, ಶುರನ್ದ–ವೃದ್ಧಿಹೊಂದುತ್ತಿದ್ದ, ಮುನ್ನೈಪ್ಪಳೈವಿನೈ–ಮತ್ತು ಪೂರ್ವಾರ್ಜಿತ ಕರ್ಮಗಳನ್ನು, ವೇರ್‌ಅರುತ್ತು–ಸಮೂಲವಾಗಿ ನಾಶಮಾಡಿದ, ಪಾದಮುಂ–ಪಾದಗಳನ್ನು, ಎನ್‌ಶೆನ್ನಿಲ್–ನನ್ನ ಶಿರಸ್ಸಿನಲ್ಲಿ, ತರಿಕ್ಕ–ಧರಿಸಲು, ವೈತ್ತಾನ್–ಮಾಡಿದರು, ಹೀಗಿರುವಲ್ಲಿ, ಎನಕ್ಕು–ನನಗೆ, ಏದುಮ್–ಯಾವ, ಶಿದೈವು–ಹಾನಿಯೂ, ಇಲ್ಲೈ–ಇರುವುದಿಲ್ಲ. (ಮತ್ತೊಂದು ಅರ್ಥ— ಪರನ್–ಪರಾತ್ಪರನಾದ ಶ್ರಿಯಃ ಪತಿಯು, ಪಾದಮುಮ್–ಶ್ರೀಪಾದಗಳ ಸಹಿತವಾಗಿ,

ಎನ್‌ಶೆನ್ನಿ—ನನ್ನ ಶಿರಸ್ಸಿನಲ್ಲಿ, ತರಿಕ್ಕವೈತ್ತಾನ್—ಧರಿಸುವಂತೆ ಮಾಡಿದರು, ಎಂಬುದಾಗಿ, ಸರ್ವೇಶ್ವರನ ಶ್ರೀಪಾದಾರವಿಂದಗಳನ್ನು ನನ್ನ ಶಿರಸ್ಸಿನಲ್ಲಿ ಧರಿಸುವಂತೆ ಮಾಡಿದರು.)

ಸೃಷ್ಟಿ, ಸ್ಥಿತಿ, ಸಂಹಾರಕನಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಸಕಲ ಜಗತ್ಕಾರಣ ಭೂತನಾಗಿಯೂ ಇರುವ ಸರ್ವೇಶ್ವರನ ಸ್ವರೂಪ ಜ್ಞಾನವನ್ನು ಶ್ರೀಭಾಷ್ಯ, ಗೀತಾಭಾಷ್ಯಾದಿಗಳಿಂದ ವಿಶದೀಕರಿಸಿ, ತಮ್ಮ ನಿರ್ಹೇತುಕ ಕಟಾಕ್ಷದಿಂದಲೂ, ಅಜ್ಞಾನದಿಂದಲೂ, ಪೂರ್ವಾರ್ಜಿತ ಕರ್ಮಗಳಿಂದಲೂ ಬಂಧಿತನಾಗಿದ್ದ ನನ್ನನ್ನು ಇಂದು ಪರಿಗ್ರಹಿಸಿ, ಸಮೂಲವಾಗಿ ನನ್ನ ಅನಾದಿಕಾಲದ ಅಜ್ಞಾನ ವಾಸನಾದಿಗಳನ್ನು ನಾಶಮಾಡಿ, ಮಂತ್ರ, ಮಂತ್ರಾರ್ಥ ಜ್ಞಾನೋಪದೇಶಗಳಿಂದ ಸ್ವರೂಪ ಜ್ಞಾನಿಯನ್ನಾಗಿ ಮಾಡಿದ ಎಂಬೆರುಮಾನರ ಶ್ರೀಪಾದಗಳು ನನಗೆ ಶಿರೋಭೂಷಣವಾಗಿರುವಲ್ಲಿ ನನಗೆ ಇನ್ನು ಯಾವ ಹಾನಿಯೂ ಉಂಟಾಗಲಾರದು.

ಈ ಪಾಶುರದಲ್ಲಿ ತಾವು ರಚಿಸಲಿರುವ ಗ್ರಂಥದಲ್ಲಿ ದೋಷವೇನಾದರೂ ಇರುವುದನ್ನು ಕಂಡು ಕೆಲವರು ನಿಂದಿಸುವರೆಂಬ ಭೀತಿಯಿಂದ ಈ ಕಾರ್ಯವನ್ನು ಬಿಟ್ಟು ಬಿಡೋಣವೇ ಎಂದು ಯೋಚಿಸಿದವರು ಮತ್ತೆ ತಾವೇ ಮನಸ್ತೃಪ್ತಿ ಹೊಂದಿ ಪ್ರವರ್ತಿಸಿರುತ್ತಾರೆ.

**ಎನಕುತ್ತ ಶೆಲ್ವಮಿರಾಮಾನಶನ್, ಎನ್ರಿಶೈಯಗಿಲ್ಲಾ**
**ಮನಕ್ಕುತ್ತ ಮಾಂದರ್ ಪಳಿಕ್ಕಿಪುರ್ಗಳ್, ಅವನ್‌ಮನ್ನಿಯುಶೀರ್**
**ತನಕ್ಕುತ್ತ ವನ್ಬನವನ್ತಿರುನಾಮಂಗಳ್ ಶಾತ್ತುಮೆನ್ ಪಾ**
**ವಿನಕ್ಕುತ್ತಂಕಾಣಗಿಲ್ಲಾರ್, ಪತ್ತಿಯೇಯ್‌ನ್ದವಿಯಲ್ವಿದೆನ್ರೇ. 5**

ಎನಕ್ಕು—ನನಗೆ, ಉತ್ತ—ಸ್ವರೂಪಕ್ಕೆ ತಕ್ಕ, ಶೆಲ್ವಮ್—ಸಂಪದವು, ಇರಾಮಾನುಶನ್—ಯತಿರಾಜರು, ಎನ್ರು—ಎಂದು (ಸ್ತೋತ್ರ ಮಾಡಲು), ಇಶೈಯಗಿಲ್ಲಾ—ಸಮ್ಮತಿಸದ, ಮನಕುತ್ತಮ್—ಮನೋದೋಷದಿಂದ, ಮಾನ್ದರ್—ಮನುಷ್ಯರು, ಪಳಿಕ್ಕಿಲ್—ನಿಂದಿಸುವರೆಂಬುದು (ಕೂಡ), ಪುಗಳ್—ಸ್ತುತಿಯೇ ಆಗುವುದು, ಅವನ್—ಆ ಯಾವ ಮನುಷ್ಯರ ಬಗ್ಗೆ, ಮನ್ನಿಯ—ಸ್ಥಿರಚಿತ್ತದಿಂದ, ಶೀರ್‌ದನಕ್ಕು—ಜ್ಞಾನ ಶಕ್ತ್ಯಾದಿ ಕಲ್ಯಾಣ ಗುಣಗಳಿಗೆ, ಉತ್ತ—ಸರಿಯೆಂದು, ಅನ್ಬರ್—ಪ್ರೇಮ ಉಳ್ಳವರು, ಪತ್ತಿ—ಭಕ್ತಿಯಿಂದ, ಏಯ್‌ನ್ದ—ಕೂಡಿದ, ಇಯಲ್ವದು—ಪ್ರಪತ್ತಿಯಾಗಿದೆ, ಎನ್ರು—ಎಂದು, ಅವನ್—ಆ ಯೆಂಬೆರುಮಾನರ ಯಾವ, ತಿರುನಾಮಂಗಳ್—ತಿರುನಾಮಗಳನ್ನು, ಶಾತ್ತುಮ್—ಹೇಳುತ್ತಿರಲು, ಎನ್—ನನ್ನ ಯಾವ, ಪಾಯಿನಮ್—ಪಾಶುರಗಳ ಸಮುದಾಯಕ್ಕೆ, ಕುತ್ತಮ್—ದೋಷವನ್ನು, ಕಾಣಗಿಲಾರ್—ನೋಡಲಾರರು.

ನಮ್ಮ ಸ್ವರೂಪಾನುರೂಪವೆಂಬ ಸಂಪತ್ತು, ಉಡೈಯವರೇ ಎಂದು ತ್ರಿಕರಣ ಶುದ್ಧಿಯಿಂದ ಅವರ ಗುಣಾನುಭವ ಕೈಂಕರ್ಯಪರರಾದರೆ, ಚೇತನನಿಗೆ ಪರವು ಪುರುಷಾರ್ಥವು. ಅದನ್ನು ಬಿಟ್ಟು ತಮ್ಮ ಪಾಪಕರ್ಮಗಳಿಂದಲೂ ಅಸೂಯಾ ಕ್ರೋಧಾದಿಗಳಿಂದಲೂ ಮನುಷ್ಯರು ಈ ಗ್ರಂಥವನ್ನು ನಿಂದಿಸುವರೇನೋ ! ಆದರೂ, ಅದೂ ಸ್ತುತಿಯೇ ಆಗುವುದು. ಯತಿರಾಜರ ಕಲ್ಯಾಣಗುಣಗಳಲ್ಲಿ ನಿಷ್ಠೆಯುಳ್ಳ ಮಹಾತ್ಮರು ಭಕ್ತಿಪ್ರೇರಿತರಾಗಿ ಅವರ ತಿರುನಾಮಗಳನ್ನು ಪ್ರತಿಪಾದಿಸುತ್ತಿರುವ ಈ ಪ್ರಬಂಧದಲ್ಲಿ ಯಾವ ವಿಧವಾದ ದೋಷವಿದೆ ಎನ್ನಲಾರರು. ಅದರಿಂದ ಮಹಾತ್ಮರಿಗೆ ಸಮ್ಮತವಾಗುವ ಈ ಗ್ರಂಥ ರಚನೆಯಾಗಿದೆ.

ಈ ಪಾಶುರದಲ್ಲಿ ಹಿಂದೆ ಹೇಳಿದಂತೆ ಭಕ್ತಿಯುಕ್ತ ಮಾಡಲು ಪ್ರಬಂಧವೆಂದರೂ, ಅಂತಹ ಭಕ್ತಿಯು ತಮಗೆ ಇರುವುದೇ ಎಂದು ಆಲೋಚಿಸಿ, ಯತಿರಾಜರ ವಿಷಯಕ್ಕೆ ಬೇಕಾದ ಭಕ್ತಿ ತನಗಿಲ್ಲವೆಂದು ತಮ್ಮನ್ನು ನಿಂದಿಸಿಕೊಳ್ಳುತ್ತಿರುವರು.

**ಇಯಲುಮ್ಪೊರುಳುಮಿಶೈಯತ್ತೊಡುತ್ತು, ಈನ್ಕವಿಗಳನ್ಬಾಲ್**
**ಮಯಲ್ ಕೊಂಡುವಾಳ್ತ್ತುಮಿರಾಮಾನುಶನ್ನೈ,**
**ಮದಿಯಿನ್ಮೈಯಾಲ್**
**ಪಯಿಲುಮ್ ಕವಿಗಳಿಲ್ ಪತ್ತಿ ಇಲ್ಲಾದ ವೆನ್ ಪಾವಿನೆಂಗ್ಗಾಲ್**
**ಮುಯಲ್ ಗಿನ್ರನನ್, ಅವನ್ದನ್ ಪೆರುಂಗೀರ್ತಿ**
**ಮೊಳಿನ್ದಿಡವೇ.** 6

ಇಯಲುಂ–ಶಬ್ದವನ್ನು, ಪೊರುಳುಮ್–ಅರ್ಥವನ್ನು, ಇಶೈಯ–ಹೊಂದಿರುವಂತೆ, ತೊಡುತ್ತು–ಸೇರಿಸಿ, ಈನ್–ವಿಲಕ್ಷಣವಾದ, ಕವಿಗಳ್–ಕವಿಗಳು, ಅನ್ಬಾಲ್–ಪ್ರೇಮದಿಂದ, ಮಯಿಲ್ಕೊಂಡು–ಮೈಮರೆತು, ವಾಳ್ತ್ತುಮ್–ಸ್ತುತಿಸುತ್ತಿರುವ, ಇರಾಮಾನುಶನ್ನೈ–ಯತಿರಾಜರನ್ನು, ಪಯಿಲುಮ್–ಕ್ರಮಪದ್ಧತಿ ತಪ್ಪಿ ಹೇಳಿದಂತೆ, ಕವಿಗಳಿಲ್–ಕವನಗಳಲ್ಲಿ, ಪತ್ತಿಯಿಲ್ಲಾದ–ಭಕ್ತಿ ಇಲ್ಲದಿರುವಾಗ, ಎನ್–ನನ್ನ ಯಾವ, ಪಾವಿನೆಂಗಾಲ್–ಪಾಪಿಷ್ಟ ಮನಸ್ಸಿನಲ್ಲಿ, ಅವನ್ತನ್–ಆ ರಾಮಾನುಜಾಚಾರ್ಯರ ಯಾವ, ಪೆರುಮ್–ಮಿತಿ ಇಲ್ಲದ, ಕೀರ್ತಿ–ಯಶಸ್ಸನ್ನು, ಮೊಳಿನ್ದಿಡ–ವಹಿಸಿದಂತೆ, ಮದಿಯಿನ್ಮೈಯಾಲ್ – ಅರಿವಿಲ್ಲದೆಯೇ, ಮಯಲ್ಗಿನ್ರನ್ – ಉತ್ಸುಕನಾಗುತ್ತಿರುವೆನು.

ಶಬ್ದಾಲಂಕಾರ, ಅರ್ಥಾಲಂಕಾರಾದಿ ಸರ್ವಲಕ್ಷಣ ಸಂಪನ್ನ ಪ್ರಬಂಧಗಳನ್ನು ರಚಿಸುವ ಸಾಮರ್ಥ್ಯಉಳ್ಳ ಕವಿಗಳು ಯತಿರಾಜರ ಮೇಲಿನ ಪ್ರೇಮಾತಿಶಯಗಳಿಂದ, ಎಲ್ಲವನ್ನೂ ಮರೆತು ಆಚಾರ್ಯರ ವಿಷಯವಾಗಿ ಸದಾ ಪ್ರಬಂಧರೂಪದಲ್ಲಿ ಸ್ತೋತ್ರ

ಮಾಡುವರು. ಅಂತಹ ಪ್ರಬಂಧ ರಚನೆಯ ಶಕ್ತಿಯಿಲ್ಲದ ನಾನು, ಅಜ್ಞಾನದಿಂದ ಉಡೈಯವರ ಅತ್ಯಂತವಾದ ಕೀರ್ತಿಯನ್ನು ಪ್ರಬಂಧ ರೂಪದಲ್ಲಿ ರಚಿಸಲು ಉತ್ಸುಕನಾಗಿರುವೆನಲ್ಲಾ ! ಎನ್ನುತ್ತಾರೆ.

ತಮ್ಮ ಅಯೋಗ್ಯತೆಯನ್ನು ಚಿಂತಿಸಿ ಹಿಂಜರಿದವರು, ಈ ಪಾಶುರದಲ್ಲಿ ಕೂರತ್ತಾಳ್ವಾರ್ ಅವರ ತಿರುವಡಿಗಳ ಸಂಬಂಧವಿರುವಾಗ್ಯೆ ತಮಗೆ ಅಸಾಧ್ಯವಾದುದು ಯಾವುದೂ ಇಲ್ಲ ಎಂದು ಸ್ತೋತ್ರ ಮಾಡುತ್ತಾ ಧೀರ ಹೃದಯವಂತರಾಗುತ್ತಾರೆ, ತಿರುವರಂಗತ್ತಮುದನಾರ್.

**ಮೊಳಿಯೈಕ್ಕಡಕ್ಕುಮ್ ಪೆರುಮ್ ಪುಗಳಾನ್,**
**ವಂಜ್ಞ ಮುಕ್ಕುರುಮ್ಬಾಮ್,**
**ಕುಳಿಯೈಕ್ಕಡಕ್ಕುಮ್ ನಮ್ ಕೂರತ್ತಾಳ್ವಾನ್,**
**ಶರಣ್ ಕೂಡಿಯಪಿನ್**
**ಪಳಿಯೈಕ್ಕಡತ್ತು ಇರಾಮಾನುಶನ್ ಪುಗಳ್ ಪಾಡಿಯಲ್ಲಾ**
**ವಳಿಯೈಕ್ಕಡತ್ತಲ್, ಎನಕ್ಕಿನಿಯಾದುಮ್ ವರುತ್ತಮನ್ರೇ.** 7

ಮೊಳಿಯೈ–ಬಾಯಿಂದ ನುಡಿಯನ್ನು, ಕಡಕ್ಕುಮ್–ಅತಿಕ್ರಮಿಸಿರುವ (ವರ್ಣಿಸಲು ಸಾಧ್ಯವಿಲ್ಲದ) ಪೆರುಮ್–ಉತ್ತಮವಾದ, ಪುಗಳಾನ್–ಕೀರ್ತಿಯುಳ್ಳವರಾದ, ವಂಜ್ಞಮ್–ವಂಚಿಸುತ್ತಿರುವ (ಒಳ್ಳೆಯ ಮಾರ್ಗವನ್ನು ತಪ್ಪಿಸಿಕೊಳ್ಳುವಂತೆ ಮಾಡುವ), ಮುಕ್ಕುರುಂಬುಆಮ್–ಮೂರು ವಿಧವಾದ್ದು ಅಂದರೆ (ಉನ್ನತ ಕುಲವು, ವಿದ್ಯಾಪಾರೀಣತೆಯು ಮತ್ತು ಧನ ಮದವು) ಎಂಬ ಅಹಂಕಾರಗಳಿಂದ, ಕುಳಿಯೈ–ಪಡುಪಾಟುಗಳನ್ನು, ಕಡಕ್ಕುಮ್–ದಾಟಿದವರಾದ, ನಮ್–ನಮಗೆ ಸ್ವಾಮಿಯಾದ, ಕೂರತ್ತಾಳ್ವಾನ್–ಕೂರತ್ತಾಳ್ವಾನ್ ಅವರಲ್ಲಿ ಯಾವ, ಶರಣ್–ತಿರುವಡಿಗಳ ರಕ್ಷಣೆಯನ್ನು, ಕೂಡಿಯ ಪಿನ್–ಆಶ್ರಯಿಸಿದ ಮೇಲೆ, ಪಳಿಯೈ–ದೋಷಗಳಿಗಾಗಿ ಅನುಭವಿಸಲೇ ಬೇಕಾಗಿದ್ದ ಪಾಪಕರ್ಮಗಳಿಂದ, ಕಡತ್ತುಮ್–ಮುಳುಗುವುದರಿಂದ ಮೇಲೆತ್ತಿ ದಾಟಿಸುತ್ತಿರಲಾಗಿ, ಇರಾಮಾನುಶನ್–ಉಡೈಯವರ ಯಾವ, ಪುಗುಳ್–ದಿವ್ಯ ಗುಣಗಳನ್ನು, ಪಾಡಿ–ಸಂಕೀರ್ತನೆ ಮಾಡುತ್ತಾ, ಅಲ್ಲಾವಳಿಯೈ–ಸ್ವರೂಪ ವಿರುದ್ಧವಾಗಿರುವ ಮಾರ್ಗಗಳನ್ನು, ಕಡತ್ತಲ್–ದಾಟುವುದಕ್ಕಾಗಿ, ಎನಕ್ಕು–ನನಗೆ, ಇನಿ–ಇನ್ನುಮೇಲೆ, ಯಾದುಮ್–ಯಾವೊಂದೂ, ವರುತ್ತಮ್ ಅನ್ರು–ಶ್ರಮವಾಗದು.

ಮಾತಿನಲ್ಲಿ ವಿವರಿಸಲು ಅಸದೃಶವಾದ ಮಹತ್ತು ಮತ್ತು ಯಶಸ್ಸನ್ನು ಹೊಂದಿರುವ, ಲೋಕದಲ್ಲಿ ನಾಶಹೊಂದಲು, ಧನಮದ, ಕುಲಮದ, ವಿದ್ಯಾಮದ

ಗಳು ಕಾರಣವಾದರೂ, ಇವೆಲ್ಲವನ್ನೂ ಮೀರಿನಿಂತಿರುವ, ಜ್ಞಾನ, ಭಕ್ತಿ, ವೈರಾಗ್ಯ ಸಂಪತ್ತಿನಿಂದ ಪ್ರಕಾಶಿಸುತ್ತಿರುವ, ಕೂರತ್ತಾಳ್ವಾನ್ ಅವರ ಶ್ರೀಪಾದಗಳನ್ನು ಆಶ್ರಯಿಸಿ, ಜಗದಾಚಾರ್ಯರಾದ, ಚೇತನರ ದೋಷಗಳನ್ನು ನಾಶಗೊಳಿಸಿ ಉದ್ಧಾರ ವಾಗುವಂತೆ ಮಾಡುತ್ತಿರುವ, ಕೃಪಾ ಸ್ವರೂಪರಾಗಿರುವ, ಯತಿರಾಜರ ಯಾವ ದಿವ್ಯ ಗುಣಗಾನಮಾಡಿ, ದುರ್ಮಾರ್ಗಗಳನ್ನು ದಾಟಿರಬೇಕಾದರೆ ನನಗೆ ಯಾವದೂ ಪ್ರಯಾಸವೆನಿಸದು ಎಂದೂ, ಕೂರತ್ತಾಳ್ವಾನ್ ಅವರ ಸಂಬಂಧದಿಂದ ಸರ್ವಾಭೀಷ್ಟ ಸಿದ್ಧಿಸುವುದು, ಎನ್ನುತ್ತಾರೆ ತಿರುವರಂಗತ್ತಮುದನಾರ್ ಅವರು.

ಇನ್ನು ಈ ಪಾಶುರದಿಂದ ಮೊದಲು ಮಾಡಿಕೊಂಡು ಸ್ತೋತ್ರ ಮಾಡಲು ಉಪಕ್ರಮಿಸಿರುವರು. ಪ್ರಥಮ ಆಳ್ವಾರ್, ಪೊಯ್‌ಗೈಯ್ ಆಳ್ವಾರ್ ಅವರು ಅನು ಗ್ರಹಿಸಿರುವ ದಿವ್ಯ ಪ್ರಬಂಧವನ್ನು ತಮ್ಮ ಹೃದಯ ಮಂದಿರದಲ್ಲಿರಿಸಿಕೊಂಡಿರುವ ಎಂಬೆರುಮಾನರರು ನಮಗೆ ನಾಥರು ಎಂದು ಹೇಳುತ್ತಾರೆ.

**ಮರುತ್ತುಮ್ ಪುರಮಿರುಳ್ ಮಾತ್ತ, ಎಮ್ ಪೊಯ್‌ಗೈಪ್**
**ಪಿರಾನ್ ಮರೈಯಿನ್**
**ಕುರುತ್ತಿನ್ ಪೊರುಳೈಯುಮ್ ಶೆನ್ದಮಿಳ್**
**ತನ್ನೈಯುಮ್ ಕೂಟ್ಟಿ, ಯೊನ್ರ**
**ತಿರಿತ್ತನ್ರೆರಿತ್ತ ತಿರುವಿಳಕ್ಕೈತ್ತನ್ ತಿರುವುಳ್ಳತ್ತೇ**
**ಯಿರುತ್ತುಮ್ ಪರಮನ್, ಇರಾಮಾನುಶ ನೆಮ್ಮೈ ನೈಯುವನೇ.** 8

ಮರುತ್ತುಂ—ಜೀವರಿಗೆ ಶ್ರಮವನ್ನುಂಟು ಮಾಡುತ್ತಿರುವ, ಪುರಮ್—ಸಾಮಾನ್ಯ ವಿಷಯ ಪ್ರಾಮಾಣ್ಯಕ್ಕೆ ಸಾಧನವಾದ, ಇರುಳ್—ಅಜ್ಞಾನವೆಂಬ ಕತ್ತಲೆಯನ್ನು, ಮಾತ್ತ—ನಾಶ ಮಾಡಿಕೊಳ್ಳಲು, ಎಮ್—ನನ್ನ ಯಾವ ಸಂಬಧವನ್ನುಳ್ಳ ಪ್ರಪನ್ನ ಜನರಿಗಾಗಿ, ಪೊಯ್‌ಗೈಪ್ಪಿರಾನ್—ಕಾಂಚೀಪುರದ ಪುಂಡರೀಕ ಸರಸ್ಸಿನಲ್ಲಿ ಅವತರಿಸಿದ ಪೊಯ್‌ಗೈ ಆಳ್ವಾರರು, ಮರೈಯಿನ್—ವೇದಗಳ ಯಾವ, ಕುರುತ್ತಿನ್—ವೇದಗಳ ಕೊನೆಯ ಭಾಗವಾದ ಉಪನಿಷತ್ತುಗಳ, ಪೊರುಳೈಯುಮ್—ಅರ್ಥವನ್ನು, ಶೆಮ್—ತತ್ವ, ಹಿತ, ಪುರುಷಾರ್ಥಗಳನ್ನು ಸರಿಯಾಗಿ ಪ್ರತಿಪಾದಿಸಲು ಮನೋಜ್ಞವಾದ, ತಮಿಳ್ ತನ್ನೈಯುಮ್—ದ್ರಾವಿಡ ರೂಪದಲ್ಲಿರುವ ದಿವ್ಯ ಪ್ರಬಂಧಗಳಲ್ಲಿರುವ, ಕೂಟ್ಟಿ—ಉತ್ತಮವಾದ ತಮಿಳು ಪದಗಳನ್ನು ಸೇರಿಸಿ, ಒನ್ರ—ಅನೇಕವು ಸೇರಿ ಏಕ ವಾಗುವುವು ಎಂಬುವ, ತಿರಿತ್ತು—ಸಂಬಂಧ ತಿಳಿಸಿ, ಅನ್ರು—ಒಂದು ಮನೆಯ ಜಗಲಿಯ ಮೇಲೆ ಭಗವಂತನು ಕಾಣಿಸಿಕೊಂಡಾಗ, ಎರಿತ್ತ—ಪ್ರಕಾಶಪಡಿಸಿದ (ಪಾಡಿದ), ತಿರುವಿಳಕ್ಕೈ—ದಿವ್ಯ ದೀಪವನ್ನು, ತನ್ ತಿರುವುಳ್ಳತ್ತೇ—ತಮ್ಮ ಹೃದಯ

ದಲ್ಲಿ, ಇರುತ್ತನ್‌–ಇಟ್ಟುಕೊಂಡಿರುವ, ಸಿರಮನ್‌–ನಿರತಿಶಯ ಪ್ರಭಾವವುಳ್ಳ, ಇರಾಮಾನುಶನ್–ಎಂಬೆರುಮಾನಾರರು, ಎಮ್–ನಮಗೆ, ಇಱೈಯವನ್–ಸ್ವಾಮಿ ಯಾಗಿರುವರು.

ಸಕಲ ಜಗತ್ಕಾರಣ ಭೂತನಾದ ಶ್ರೀಮನ್ನಾರಾಯಣನು, ಈ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಾದಿ ಕಾರ್ಯಗಳನ್ನು ಮಾಡುತ್ತಿರಲು, ಆ ಸರ್ವೇಶ್ವರನ ಆಜ್ಞೆಗೆ, ಬ್ರಹ್ಮ, ರುದ್ರ, ಸೂರ್ಯ, ಅಗ್ನಿ, ಯಮರೇ ಮೊದಲಾದ ದೇವಗಣಗಳಲ್ಲಿ ಅಂತರಾತ್ಮನಾಗಿ ಕಾರ್ಯನಿರ್ವಹಿಸುತ್ತಿರಲು, ಕೆಲವು ಅಜ್ಞಾನಿಗಳು, ಇವೆಲ್ಲಾ ಅಸತ್ಯವೆಂದೂ, ಚೇತನಾ ಚೇತನ ಸಕಲ ಪದಾರ್ಥಗಳಿಗೂ ಕಾರಣಭೂತನು ಒಬ್ಬನು ಇದ್ದಾನೆ ಎಂಬ ವಿವೇಕ ವಿಲ್ಲದೆ, ನಾಸ್ತಿಕರಾಗಲು ಮತ್ತು ಲೋಕದಲ್ಲಿ ಕೆಲವರು ಅವನನ್ನು ನಂಬಿದರೂ ವಾಸ್ತವಾರ್ಥವನ್ನರಿಯದೆ ತಮ್ಮ ಅಜ್ಞಾನಾಂಧಕಾರದಲ್ಲಿ ಶ್ರಮಪಡುತ್ತಿರಲು, ಇವರುಗಳ ಅಜ್ಞಾನವನ್ನು ನಿವಾರಿಸಲೋಸುಗ, ಲೋಕೋಪಕಾರಕ್ಕೋಸ್ಕರ ಅವತರಿಸಿದ ಮೊದಲನೆಯ ಆಳ್ವಾರ್, ಪೊಯ್‌ಗೈಯ್ ಆಳ್ವಾರ್. ಅವರು ಭೂಲೋಕದಲ್ಲಿ ಅವತರಿಸಿ, ತಿರುಕ್ಕೋಟಿಯೂರ್‌ನ ಒಂದು ಮನೆಯ ಜಗಲಿಯ ಮೇಲೆ ಇರುವಾಗ ಶ್ರಿಯಃಪತಿಯ ದರ್ಶನ ಪಡೆದು, ಒಡನೆ ಮೊದಲ್ ತಿರುವಂದಾದಿ ಎಂದು ಪ್ರಸಿದ್ಧಿ ಪಡೆದಿರುವ ದಿವ್ಯಪ್ರಬಂಧವನ್ನು ಪಾಡಿದರು. ಇಂತಹ ವೈಯನ್ದಗಳಿ ಎಂಬುವ ದ್ರಾವಿಡ ಪ್ರಬಂಧ ಜ್ಯೋತಿಯನ್ನು ತಮ್ಮ ಹೃದಯ ಮಂದಿರದಲ್ಲಿ ಸ್ಥಾಪಿಸಿಕೊಂಡಿರುವ ಶ್ರೀಮದ್ರಾಮಾನುಜರೇ ನಮ್ಮ ಸ್ವಾಮಿಗಳು ಎಂದು ಹೇಳುತ್ತಾರೆ.

ಈ ಪಾಶುರದಲ್ಲಿ, ಪೂದತ್ತಾಳ್ವಾರರ ತಿರುವಡಿಗಳನ್ನು ತಮ್ಮ ಹೃದಯ ಮಂದಿರದಲ್ಲಿ ಇಟ್ಟುಕೊಂಡು ಅನುಭವಿಸುವ ಎಂಬೆರುಮಾನಾರ್ ಅವರ ಕಲ್ಯಾಣ ಗುಣಗಳನ್ನು ಅನುಸಂಧಾನ ಮಾಡುವವರು, ವೇದಗಳನ್ನು ಕಾಪಾಡಿ ಲೋಕದಲ್ಲಿ ಪ್ರತಿಷ್ಠಿತರಾದವರು ಎನ್ನುತ್ತಾರೆ, ಇರಾಮಾನುಶ ನೂತ್ತಂದಾದಿ ಕರ್ತೃವಾದ ತಿರುವರಂಗತ್ತ ಅಮುದನಾರ್ ಅವರು.

**ಇಱೈವನೈ ಕ್ಕಾಣವಿದಯತ್ತಿರುಳ್‌ಕೆಡ, ಜ್ಞಾನಮೆನ್ನುಮ್**
**ನಿಱೈವಿಳಕ್ಕೇತ್ತಿಯ ಪೂದತ್ತಿರುವಡಿತ್ತಾಳ್‌ಗಳ್, ನೆಂಗಿ**
**ತ್ತುಱೈಯ ವೈತ್ತಾಳು ಮಿರಾಮಾನುಶನ್ ಪುಗಳೋದುಮ್**
**ನಲ್ಲೋರ್**
**ಮಱೈಯಿನೈಕ್ಕಾತ್ತು, ಇನ್ದಮಣ್ಣಗತ್ತೇಮನ್ನವೈಪ್ಪವರೇ.** 9

ಇರೈವನೈ–ಸ್ವಾಮಿಯಾದ ಶ್ರಿಯಃ ಪತಿಯನ್ನು, ಕಾಣುಮ್–ಸೇವಿಸಲು ಉಪಕರಣವಾಗಿ, ಇದಯತ್ತು–ಹೃದಯವೆಂಬುದು ಇರುವಾಗ, ಇರುಳ್–ಅಜ್ಞಾನವು, ಕೆಡ–ನಶಿಸುವಂತೆ, ಜ್ಞಾನಮ್ ಎನ್ನುಮ್–ಪರಜ್ಞಾನವನ್ನು, ನಿರೈವಿಳಕ್ಕು–ಪರಿಪೂರ್ಣ ದೀಪವನ್ನು, ಏತ್ತಿಯ–ಪ್ರಕಾಶಪಡಿಸಿದ, ಪೂತಮ್–ಪೂದತ್ತಾಳ್ವಾರ್‌ರ, ತಿರುವಡಿ ತಾಳ್‌ಕಳ್–ಶ್ರೀಪಾದ ಪದ್ಮಗಳನ್ನು, ನೆಂಗಿತ್ತು–ಮನಸ್ಸಿನಲ್ಲಿ, ಉರೈಯ–ಸದಾ ನೆಲೆಸಿರಲು, ವೈತ್ತು–ಅನುವು ಮಾಡಿಕೊಟ್ಟು, ಆಳುಮ್–ಅನುಭವಿಸುವ, ಇರಾಮಾನುಶನ್–ಎಂಬೆರುಮಾನಾರ್‌ರ ಯಾವ, ಪುಗಳ್–ದಿವ್ಯ ಗುಣಗಳನ್ನು, ಓದುಮ್–ಸದಾ ಅನುಸಂಧಾನ ಮಾಡುತ್ತಿರುವ, ನಲ್ಲೋರ್–ಸತ್ಪುರುಷರುಗಳು, ಮರಿಯಿನೈ–ವೇದಗಳನ್ನು, ಕಾತ್ತು–ಕಾಪಾಡಿ, ಇನ್ದ ಮಣ್ಣಗತ್ತೇ–ಈ ಲೋಕದಲ್ಲಿ, ಮನ್ನ–ಶಾಶ್ವತವಾಗಿರುವಂತೆ, ವೈಪ್ಪವರ್–ಇರಿಸುವವರಾಗಿದ್ದಾರೆ.

ಸರ್ವೇಶ್ವರನಿಗೆ ವಾಸಸ್ಥಾನವಾಗಿರುವ ಮತ್ತು ಚೇತನನು ಭಗವಂತನನ್ನು ಸೇವಿಸಲು ಸಾಧನವಾದ ಹೃದಯ ಮಂದಿರದಲ್ಲಿ ತುಂಬಿರುವ, ಅಜ್ಞಾನವೆಂಬ ಕತ್ತಲೆಯನ್ನು ಜ್ಞಾನವೆಂಬ ದೀಪದಿಂದ ಆ ಅಜ್ಞಾನವನ್ನು ತೊಲಗಿಸಿ, ಆ ಶ್ರೀಮನ್ನಾರಾಯಣನನ್ನು ಪ್ರತ್ಯಕ್ಷವಾಗಿ ಸೇವಿಸಿದ ಪೂದತ್ತಾಳ್ವಾರ್ ಅವರ ಚರಣಾರವಿಂದಗಳನ್ನು ಸದಾ ಕಾಲ ಧ್ಯಾನಿಸುತ್ತಿರುವ ಯತಿರಾಜರ ಕಲ್ಯಾಣ ಗುಣಗಳನ್ನು, ಅನುಸಂಧಾನ ಮಾಡುವಂತಹ ಮಹನೀಯರೇ ವೈದಿಕ ಸಿದ್ಧಾಂತವನ್ನು ಸಂರಕ್ಷಿಸಿ ಸುಸ್ಥಿತಿಯಲ್ಲಿ ಸ್ಥಾಪಿಸುವರು ಎಂಬುದಾಗಿ ಪೂದತ್ತಾಳ್ವಾರ್ ಅವರನ್ನು ಸ್ತುತಿಸಿರುವರು.

ಈ ಪಾಶುರದಲ್ಲಿ ಪೇಯಾಳ್ವಾರ್ ಅವರನ್ನು ಸ್ಮರಿಸಿ ಸ್ತುತಿಸುತ್ತಾರೆ.

**ಮನ್ನಿಯ ಪೇರಿರುಳ್ ಮಾಂಡಪಿನ್, ಕೋವಲುಳ್**
**ಮಾಮಲರಾಳ್**
**ತನ್ನೊಡು ಮಾಯನೈಕ್ಕಂಡಮೈಕಾಟ್ಟುಮ್,**
**ತಮಿಳ್‌ತ್ತಲೈವನ್**
**ಪೊನ್ನಡಿಪೋತ್ತುಮಿರಾಮಾನುಶರ್ಕನ್ಬುಪೂಣ್ಡವರ್ ತಾಳ್**
**ಶಿನ್ನಿಯರ್ ಚೂಡುಮ್, ತಿರುವುಡೈಯಾರೆನ್ರುಮ್**
**ಶೀರಿಯರೇ.** 10

ಮನ್ನಿಯ–ನಿವಾರಿಸಿಕೊಳ್ಳಲಾಗದ, ಪೇರ್–ವ್ಯವಸ್ಥಿತವಾದ, ಇರುಳ್–ಅಜ್ಞಾನವೆಂಬ ಕತ್ತಲೆ, ಮಾಣ್ಡಪಿನ್–ಮೊದಲಿನ ಇಬ್ಬರು ಆಳ್ವಾರರು ಹೊತ್ತಿಸಿದ

ಜ್ಞಾನ ಜ್ಯೋತಿಯು ಪೂರ್ಣವಾಗಿ ನಂದಿಹೋದಾಗ, ಕೋವಲುಳ್–ತಿರುಕ್ಕೋವಿಲೂರಿನಲ್ಲಿ, ಮಾಮಲರಾಳ್ ತನ್ನೋಡುಂ–ಪುಷ್ಪವಾಸಿನಿಯಾದ ಶ್ರೀಮಹಾಲಕ್ಷ್ಮಿ ಸಮೇತ, ಆಯನೈ–ಕೃಷ್ಣಾವತಾರದಲ್ಲಿ ಆಶ್ರಿತರಿಗೆ ಸುಲಭನಾದ ಸರ್ವೇಶ್ವರನನ್ನು, ಕಂಡಮ್–ಪ್ರತ್ಯಕ್ಷವಾಗಿ ಸೇವಿಸಿದ ವಿಷಯವನ್ನು, ಕಾಟ್ಟುಮ್–ದಿವ್ಯ ಪ್ರಬಂಧದ ದ್ವಾರ ಕಾಣಿಸಿದ, ತಮಿಳ್ತ್ತಲೈವನ್–ತಮಿಳಿಗೆ ಮೊದಲಿಗರೆನಿಸಿದ ಪೇಯಾಳ್ವಾರ್ ಅವರ, ಪೊನ್ನಡಿ–ರಮಣೀಯವಾದ ಶ್ರೀಪಾದಗಳನ್ನು, ಪೋತ್ತುಮ್–ಸ್ತುತಿಸುವ ಸ್ವಭಾವವುಳ್ಳ, ಇರಾಮಾನುಶಕ್ಕು–ರಾಮಾನುಜರ ವಿಷಯದಲ್ಲಿ, ಅನ್ಬು–ಪ್ರೇಮವನ್ನು, ಪೂಣ್ಡವರ್–ಭೂಷಣವಾಗಿ ಧರಿಸಿಕೊಂಡವರ, ತಾಳ್–ಶ್ರೀಪಾದಗಳನ್ನು, ಶೆನ್ನಿಯಿಲ್–ತಮ್ಮ ತಲೆಯ ಮೇಲೆ, ಶೂಡಮ್–ಧರಿಸಿಕೊಳ್ಳುವ, ತಿರು–ಸಂಪತ್ತನ್ನು, ಉಡೈಯಾರ್–ಉಳ್ಳವರು, ಎನ್ರುಮ್–ಯಾವಾಗಲೂ, ಶೀರಿಯರ್–ಶ್ರೀಮಂತರು.

ತಿರುಕ್ಕೋವಿಲೂರಿನಲ್ಲಿ ಮೊದಲಿನ ಇಬ್ಬರು ಆಳ್ವಾರರು ಹೊತ್ತಿಸಿದ ಜ್ಞಾನ ಜ್ಯೋತಿಯು, ಅಜ್ಞಾನವೆಂಬ ಕತ್ತಲೆಯನ್ನು ಪೂರ್ಣವಾಗಿ ನಿವಾರಿಸದೆ ಇರುವ ಕಾಲದಲ್ಲಿ, ಸರ್ವೇಶ್ವರನು ಶ್ರೀಮಹಾಲಕ್ಷ್ಮಿ ಸಮೇತನಾಗಿ ಕೃಷ್ಣಾವತಾರದಲ್ಲಿ ಸೇವೆ ಪಡೆದ ವಿಷಯವನ್ನು ಪೇಯಾಳ್ವಾರರು " ತಿರುಕ್ಕಂಡೇನ್ " ಎಂಬ ದಿವ್ಯಪ್ರಬಂಧದ ಮೂಲಕ ಸಕಲ ಚೇತನರಿಗೆ ಪ್ರಕಾಶಪಡಿಸಿ, ದ್ರಾವಿಡ ಪಂಡಿತೋತ್ತಮರೆನಿಸಿದರು. ಅಂತಹ ಪೇಯಾಳ್ವಾರರ ಶ್ರೀಪಾದಗಳನ್ನು ಸ್ತುತಿಸುವಂತಹ ಯತಿರಾಜರಲ್ಲಿ ಪ್ರಾವಣ್ಯವುಳ್ಳ ಮಹಾತ್ಮರ ಯಾವ ಶ್ರೀಪಾದಗಳನ್ನು ಪ್ರೀತಿಯಿಂದ ಶಿರದಲ್ಲಿ ಧರಿಸುವವರು ಸದಾ ಸರ್ವ ಸಂಪನ್ನರು ಎಂದಿದ್ದಾರೆ.

**ಶೀರಿಯನಾನ್ಮರೈಚ್ಚೆಂಬೊರುಳ್, ಶೆಂದಮಿಳಾಲಳಿತ್ತ**
**ಪಾರಿಯಲುಂಪುಗಳ್ಪಾಣ್ಪೆರುಮಾಳ್, ಶರಣಾಂಬದುಮ**
**ತ್ತಾರಿಯಲ್ ಶೆನ್ನಿಯಿರಾಮಾನುಶನ್ ತನ್ನೈಚಾರ್ನ್ದವರ್ದಮ್**
**ಕಾರಿಯವಣ್ಣೈ,' ಎನ್ನಾಲ್ ಶೊಲ್ಲೊಣಾದಿ ಕಡಲಿಡತ್ತೇ.** 11

ಶೀರಿಯ–ಸ್ವರೂಪ ರೂಪಗುಣ ವಿಭೂತಿಗಳನ್ನು ತತ್ವವಾಗಿ ಪ್ರಸಾದಿಸಲು ಶ್ಲಾಘ್ಯವಾದ, ನಾಲ್ಮರೈ–ಋಗ್, ಯಜುರ್, ಸಾಮ ಅಥರ್ವವೆಂಬ ನಾಲ್ಕು ವೇದಗಳ ಯಾವ, ಶೆಮ್–ರಮಣೀಯವಾದ, ಪೊರುಳ್–ವಿಶೇಷಾರ್ಥಗಳನ್ನು, ಶೆಮ್–ಸಾರಾಂಶಗಳನ್ನು ಪ್ರತಿಪಾದಿಸಲು ಸುಂದರವಾದ, ತಮಿಳಾಲ್–ದ್ರಾವಿಡ ದಿವ್ಯ ಪ್ರಬಂಧಗಳಲ್ಲಿ, ಅಳಿತ್ತ–ಅಣತಿ ಇತ್ತವರಾಗಿ, ಪಾರ್–ಭೂಮಿಯಂದು, ಇಯಲುಂ–ವ್ಯಾಪಿಸಿರುವ, ಪುಗಳ್–ಯಶಸ್ಸು, ಪಡೆದವರಾಗಿರುವ, ಪಾಣ್ ಪೆರುಮಾಳ್–ತಿರುಪ್ಪಾಣಿ ಆಳ್ವಾರರ, ಚರಣಾಮ್–ತಿರುವಡಿಗಳಲ್ಲಿ, ಪದುಮತ್ತಾರ್–

ತಾವರೆ ಪುಷ್ಪಗಳೋಪಾದಿಯಲ್ಲಿ, ಇಯಲ್—ಅಲಂಕರಿಸಲ್ಪಟ್ಟ, ಶೆನ್ನಿ—ಶಿರಸ್ಸನ್ನು ಉಳ್ಳ, ಇರಾಮಾನುಶನ್ ತನ್ನೈ—ಯತಿರಾಜರನ್ನು, ಶಾರ್‍ನ್ದವರ್‍ತಮ್—ಆಶ್ರಯಿಸಿ ದವರ, ಕಾರಿಯಣ್ಮೈ—ವೈಲಕ್ಷಣ್ಯವು, ಇಕ್ಕಡಲ್—ಈ ಸಮುದ್ರದಿಂದ ಸುತ್ತು ವರಿಯಲ್ಪಟ್ಟ, ಇಡತ್ತು—ಭೂಮಿಯಲ್ಲಿ, ಎನ್ನಾಲ್—ನನ್ನಿಂದ, ಶೊಲ್ಲೊಣಾದು—ಹೇಳಿ ಮುಗಿಸಲು ಸಾಧ್ಯವಿಲ್ಲ.

ಮತ್ತೊಂದು ರೀತಿಯಲ್ಲಿ ಈ ಪಾಶುರವನ್ನು ಅರ್ಥೈಸಬಹುದು ಅದು ಹೀಗಿದೆ : ಇಕ್ಕಡಲಿಡತ್ತೇ, ಇರಾಮಾನುಶನ್ ತನ್ನೈ, ಚ್ಚಾರ್‍ನ್ದವರ್, ಎಂಬುದಾಗಿ ಅನ್ವಯಮಾಡಿ ಭಗವಂತನನ್ನು ಆಶ್ರಯಿಸಲು ಕೂಡ ಸಮ್ಮತಿಸುವವರು ಇಲ್ಲದ ಈ ಭೂಮಿಯಲ್ಲಿ, ಭಗವದ್ಭಕ್ತರಿಗೆ ಯತಿರಾಜರನ್ನು ಆಶ್ರಯಿಸಿದ ಮಹಾತ್ಮರನ್ನು "ಕಾರಿಯ ವಣ್ಮೈ" ಎಂದು ಪಾಠಾಂತರ ಮಾಡಿದಾಗ ಕಾರ್—ಮೇಘದ ರೀತಿಯಲ್ಲಿ, ಇಯಲ್—ಸ್ವಭಾವವುಳ್ಳ, ವಣ್ಮೈ—ಔದಾರ್ಯತ್ವ ಎಂದರ್ಥ. ಮೇಘವು ಜಲ, ಸ್ಥಳ, ಒಳ್ಳೆಯದು, ಕೆಟ್ಟದ್ದು, ಎಂಬುದನ್ನು ನೋಡದಲೇ ಎಲ್ಲ ಕಡೆಗೂ ಮಳೆಯನ್ನು ಸುರಿಸುವಂತೆ, ಮಹಾತ್ಮರು ಗುಣಾವಗುಣಗಳನ್ನು ಪರಿಶೀಲಿಸದೆಯೇ, ಸಕಲರಿಗೂ, ಯತಿರಾಜರ ದಿವ್ಯ ಗುಣಗಳನ್ನು ಉಪದೇಶಿಸಿದರು ಎಂಬುದು.

ಸಕಲ ವೇದಗಳ ಸಾರಾಂಶವಾಗಿರುವ "ಅಮಲನಾದಿ ಪಿರಾನ್" ಎಂಬ ದಿವ್ಯ ಪ್ರಬಂಧದ ದ್ವಾರಾ, ಸಕಲರಿಗೂ, ಸ್ಪಷ್ಟವಾಗುವಂತೆ ಕರುಣಿಸಿರುವ, ಜಗತ್ಪ್ರಶಸ್ತ ವಾದ ಕಲ್ಯಾಣ ಗುಣಗಳನ್ನುಳ್ಳ ಕೀರ್ತಿವಂತರಾದ, ತಿರುಪ್ಪಾಣಿ ಆಳ್ವಾರರ ಶ್ರೀಪಾದ ಗಳನ್ನು ತಲೆಯಲ್ಲಿ ಧರಿಸಿರುವ ಯತಿರಾಜರನ್ನು ಆಶ್ರಯಿಸಿದ ಭಾಗವತೋತ್ತಮರ ಯಾವ ದಿವ್ಯಪ್ರಭಾವವನ್ನು ಸ್ತೋತ್ರ ಮಾಡಲು ನನ್ನಿಂದಾಗುತ್ತಿಲ್ಲವಲ್ಲಾ ಎನ್ನುತ್ತಿದ್ದಾರೆ.

**ಇಡಂಕೊಂಡ ಕೀರ್ತಿಮಳಿಶೈಕ್ಕಿರೈವನ್, ಇಣೈಯಡಿಪ್ಪೋ**
**ದಡಂಗುಮಿದಯತ್ತಿರಾಮಾನುಶನ್, ಅಮ್ ಪೊಪಾದ**
**ಮೆನ್ರುಮ್**
**ಕಡಂಕೊಂಡಿರೈಂಗುನ್ರಿರುಮುನಿವರ್ಗನ್ರಿಕ್ಕಾದಲ್ ಶೆಯ್ಯಾ**
**ತ್ತಿಡಂಕೊಂಡ ಜ್ಞಾನಿಯರ್ಕೇ, ಅಡಿಯೇನನ್ಬು**
**ಶೆಯ್ವದುವೇ.** 12

ಇಡಂಕೊಂಡ—ಭೂಮಿಯೆಲ್ಲವನ್ನೂ ತುಂಬಿರುವ, ಕೀರ್ತಿ—ಗುಣ ಪ್ರಸಿದ್ಧಿ ಪಡೆದಿರುವ, ಮಳಿಶೈಕ್ಕು—ತಿರುಮಳಿಶೈ ಎಂಬ ದಿವ್ಯ ಸ್ಥಳಕ್ಕೆ, ಇರೈವನ್—ನಾಥರೆನಿಸಿದ ತಿರುಮಳಿಶೈ ಆಳ್ವಾರರ, ಇಣೈ—ಸೇರಲು ಸುಂದರವಾದ, ಅಡಿಪ್ಪೋದು—ಶ್ರೀಪಾದಗಳು, ಅಡಂಗುಂ—(ಮಹತ್ತರವಾದುದು) ತುಂಬಿದ, ಇದಯತ್ತು—ಆಳ್ವಾರರ ಶ್ರೀಪಾದ

ಗಳಲ್ಲಿಯೇ ಲೀನವಾಗುವ ಹೃದಯವಂತಿಕೆಯುಳ್ಳ, ಇರಾಮಾನುಶನ್–ಉಡೈಯವರ ಯಾವ, ಅಮ್–ವಿಲಕ್ಷಣವಾದ, ಪೊನ್–ಎಲ್ಲರಿಂದಲೂ ಆಶ್ರಯಿಸಲು ಯೋಗ್ಯವಾದ, ಪಾದಮ್–ಶ್ರೀಪಾದಗಳನ್ನು, ಎನ್ನುಮ್–ಎಲ್ಲ ಕಾಲದಲ್ಲಿಯೂ, ಕಡಂಕೊಂಡು– ಪ್ರಾಪ್ಯವೆಂದು ಅರಿತುಕೊಂಡು, ಇಶೈಂಗುಂ–ಆಶ್ರಯಿಸುವುದಕ್ಕಾಗಿ ಇಂದು, ತಿರು– ಸಂಪದವೆನಿಸಿದ, ಮುನಿವರ್ಕನ್ರಿ–(ಆ ವಿಷಯವನ್ನು) ನಾವು ಮಾಡುವ ಸ್ವಭಾವದಿಂದ ಮಹನೀಯರಿಗೆ ಸೇರಿದ, ಕಾದಲ್ ಶೆಯ್ಯಾ–ಸ್ನೇಹವನ್ನು ಮಾಡುವುದಿಲ್ಲವೆಂಬ, ಕಡಮ್ಕೊಂಡು–ಹೆಚ್ಚಿನ ದೃಢತೆಯಿಂದ ಅಧ್ಯವಸಾಯಗಳಿಂದ, ಜ್ಞಾನಿಯರ್ಕೇ– ಜ್ಞಾನವಂತರಿಗೇ, ಅಡಿಯೇನ್–ದಾಸನೆಂದು, ಅನ್ಬುಶೆಯ್ವದು–ಪ್ರೇಮವನ್ನು ಮಾಡತಕ್ಕದ್ದು.

ಈ ಲೋಕದಲ್ಲಿ ಅತ್ಯಂತ ಪ್ರಸಿದ್ಧಿಹೊಂದಿರುವ ಮಹಾ ಪ್ರಭಾವಶಾಲಿಯಾದ ತಿರುಮಳಿ ಶೈ ಆಳ್ವಾರ್ ಅವರ ಪಾದಾರವಿಂದಗಳಲ್ಲಿ ಪ್ರಾವೀಣ್ಯವುಳ್ಳ ಯತಿರಾಜರ ದಿವ್ಯ ಚರಣಾರವಿಂದಗಳಲ್ಲಿ ಆಶ್ರಯ ಪಡೆದು, ಬೇರೆಯವುಗಳಲ್ಲಿ ಪ್ರೇಮವಿಲ್ಲದೆ ಅವರನ್ನೇ ಮನನ ಮಾಡುತ್ತ, ದೃಢಾಧ್ಯಯನ ಮಾಡಬಲ್ಲ ಜ್ಞಾನವಂತರಲ್ಲೇ ದಾಸನಿಗೆ ಪ್ರೇಮ ದೊರಕಿತು ಎನ್ನುತ್ತಾರೆ.

**ಶೆಯ್ಯುಮ್ ಪಶುಮ್ ತುಳಪಮ್ ತೊಳಿಲ್ ಮಾಲೈಯುಮ್,**
**ಶೆನ್ದಮಿಳ್**
**ಪೆಯ್ಯುಮ್ ಮರೈತ್ತಮಿಳ್ ಮಾಲೈಯುಂ,**
**ಪೇರಾದ ಶೀರರಂಗ**
**ತ್ತೈಯ್ಯನ್ ಕಳರ್ಕಣಿಯುಮ್ ಪರಮನ್ತಾಳನ್ರಿಯಾದರಿಯಾ**
**ಮೆಯ್ಯನ್, ಇರಾಮಾನುಶನ್ ಶರಣೇಕದಿವೇರಿನಕ್ಕೇ** 13

ಶೆಯ್ಯುಮ್–ಅತಿಶಯವಾಗಿ ತಾವೇ ಸ್ವತಃ ನಿರ್ಮಿಸುತ್ತಿದ್ದ, ಪಶುಮ್– ಹಸಿರಾಗಿ ಕಾಂತಿಯುಳ್ಳ, ತುಳಪಮ್–ತುಲಸಿಯಿಂದ, ತೊಳಿಲ್–ಕ್ರಮವಾಗಿ ಕಟ್ಟಿರುವ, ಮಾಲೈಯುಮ್–ದಿವ್ಯ ಪುಷ್ಪಮಾಲಿಕೆಯನ್ನು, ಶೆನ್–ಸುಂದರ ಮನೋಹರವಾದ, ತಮಿಳ್–ದ್ರಾವಿಡ ಭಾಷೆಯಲ್ಲಿ, ಪೆಯ್ಯುಮ್–ರಚಿಸಿರುವ, ಮರೈ–ವೇದಗಳೋ ಎಂದಿರುವ, ತಮಿಳ್ ಮಾಲೆಯುಮ್–ತಮಿಳು ಭಾಷೆಯಲ್ಲಿ ರಚಿಸಿರುವ ದಿವ್ಯ ಪ್ರಬಂಧ(ತಿರುಮಾಲೈ)ವನ್ನು, ಪೇರಾದ–ಹೆಸರಾಂತ, ಶೀರ್– ಕಲ್ಯಾಣಗುಣಗಳನ್ನುಳ್ಳ, ಅರಂಗತ್ತು–ಶ್ರೀರಂಗದಲ್ಲಿನ, ಅಯ್ಯನ್–ಶ್ರೀರಂಗನಾಥನ, ಕಳರ್ಕು–ತಿರುವಡಿಗಳಿಗೆ, ಅಣಿಯುಮ್–ಸಮರ್ಪಿಸುವವರಾದ, ಪರನ್–ಶೇಷಭೂತರಲ್ಲಿ ಶ್ಲಾಘ್ಯರಾದ ತೊಂಡರಡಿಪ್ಪೊಡಿ ಆಳ್ವಾರ್ ಅವರ, ತಾಳ್ಅನ್ರಿ–ಶ್ರೀಪಾದಗಳನ್ನು

ಅಲ್ಲದೆ, ಆದರಿಯಾ–ಮತ್ತೇನನ್ನೂ ಅಪೇಕ್ಷಿಸದ, ಮೆಯ್ಯನ್–ಸತ್ಯಶೀಲರಾದ, ಇರಾಮಾನುಶನ್–ಉಡೈಯವರ ಯಾವ, ಶರಣೇ–ಶ್ರೀಪಾದಗಳೇ, ಎನಕ್ಕು–ನನಗೆ, ವೇರುಗದಿ–ಉಪಾಯೋಪೇಯವಾಗಿರುವುದು.

ದಿವ್ಯವಾದ ತುಳಸಿ ಮಾಲೆಯನ್ನು ನಿರ್ಮಿಸಿ ಮತ್ತು ವಿಶೇಷಾರ್ಥಗಳಿಂದ ಕೂಡಿದ "ತಿರುಮಾಲೈ, ತಿರುಪ್ಪಳ್ಳಿಯೆಳುಚ್ಚಿ" ಎಂಬ ಸಾರತಮವಾದ ಎರಡು ದಿವ್ಯ ಪ್ರಬಂಧಗಳನ್ನು ರಚಿಸಿ, ಶ್ರೀರಂಗನಾಥನ ಪಾದಾರವಿಂದಗಳಲ್ಲಿ ಸಮರ್ಪಿಸಿದ, ಭಕ್ತಾಗ್ರಣ್ಯರಾದ ತೊಂಡರಡಿಪ್ಪೊಡಿ ಆಳ್ವಾರರ ಚರಣಾರವಿಂದಗಳಲ್ಲಿ ಅತ್ಯಂತ ಪ್ರಾವಣ್ಯವನ್ನು ಪಡೆದಿರುವ, ಬೇರಾವುದನ್ನೂ ಅಪೇಕ್ಷಿಸದ ಸತ್ಯಶೀಲರಾದ ರಾಮಾನುಜರ ಶ್ರೀಪಾದಗಳೇ ನಮಗೆ ಉತ್ತಮ ಪುರುಷಾರ್ಥವು.

**ಕದಿಕ್ಕುಪ್ಪದರಿ, ವೆಮ್ ಕಾನಮುಮ್ ಕಲ್ಲುಮ್**
**ಕಡಲುಮ್ ಎಲ್ಲಾಮ್,**
**ಕೊದಿಕ್ಕತ್ತವಮ್ ಶೆಯ್ಯುಮ್ ಕೊಳ್‌ಗೈಯತ್ತೇನ್,**
**ಕೊಲ್ಲಿ ಕಾವಲನ್ ಶೊಲ್**
**ಪದಿಕ್ಕುಮ್ ಕಲೈಕ್ಕವಿ ಪಾಡುಮ್ ಪೆರಿಯವರ್ ಪಾದಂಗಳೇ**
**ತುದಿಕ್ಕುಮ್ ಪರಮನ್ ಇರಾಮಾನುಶನೆನ್ನೈಚ್ಚೋರ್ನ್ದಿಲನೇ.** 14

ಕೊಲ್ಲಿ ಕಾವಲನ್–ಕೊಲ್ಲಿ ನಗರವೆಂಬ ಈಗಿನ ತಿರುವನಂತಪುರಕ್ಕೆ ರಕ್ಷಕರಾದ ಕುಲಶೇಖರಪ್ಪೆರುಮಾಳ್ ಅವರು, ಕಲೈಚ್ಚೊಲ್–ಶಾಸ್ತ್ರ ವಚನಗಳನ್ನು, ಪದಿಕ್ಕುಮ್–ಹೊಂದಿರುವ, ಕವಿ–ದಿವ್ಯಪ್ರಬಂಧವನ್ನು (ಪೆರುಮಾಳ್ ತಿರುಮೊಳಿ), ಪಾಡುಮ್–ಹಾಡುತ್ತಿರುವ, ಪೆರಿಯವರ್–ಮಹಾತ್ಮರ ಯಾವ, ಪಾದಂಗಳ್–ಶ್ರೀಪಾದಗಳನ್ನು, ತುದಿಕ್ಕುಮ್–ಸ್ತುತಿಸುವ, ಪರಮನ್–ಉತ್ತಮರೆನಿಸಿದ, ಇರಾಮಾನುಶನ್–ಉಡೈಯವರು, ಎನ್ನೈ–ನನ್ನ, ಶೋರಿನ್–ಹೃದಯವನ್ನು ಸದಾ ಕಾಲವೂ ತುಂಬಿರುವರು ಅದರಿಂದ, ಕದಿಕ್ಕು–ಪುರುಷಾರ್ಥಕ್ಕೆ, ಪದರಿ–ಆತುರಪಟ್ಟು, ವೆಮ್–ಅತಿ ಉಷ್ಣದಿಂದ ಕೂಡಿದ, ಕಾನಮುಮ್–ಅರಣ್ಯವನ್ನು, ಕಲ್ಲುಮ್–ಬೆಟ್ಟಗಳನ್ನು, ಕಡಲುಮ್–ಸಮುದ್ರಗಳನ್ನು, ಎಲ್ಲಾಮ್–ಇವೆಲ್ಲವನ್ನೂ (ಅರಸಿ), ಕೊದಿಕ್ಕ–(ದೇಹವು) ದಹಿಸುವಂತೆ, ತವಮ್–ತಪಸ್ಸನ್ನು, ಶೆಯ್ಯುಮ್–ಮಾಡುತ್ತಿರುವ, ಕೊಳ್ಗೈ–ಸ್ವಭಾವವನ್ನು, ಅತ್ತೇನ್–ಬಿಟ್ಟುಬಿಟ್ಟೆನು.

ಕುಲಶೇಖರ ಆಳ್ವಾರರು ಸಕಲ ಶಾಸ್ತ್ರಗಳ ಸಾರಾಂಶ ಭೂತವಾದ "ಪೆರುಮಾಳ್ ತಿರುಮೊಳಿ" ಎಂಬ ದ್ರಾವಿಡ ಭಾಷೆಯ ದಿವ್ಯ ಪ್ರಬಂಧವನ್ನು ಕರುಣಿಸಿರಲಾಗಿ, ಅದನ್ನು ಗುಣಾನುಭವವನ್ನಾಗಿ ಮಾಡಿಕೊಂಡು ಅನುಭವಿಸುವ

ಮಹಾತ್ಮರನ್ನು ಸ್ತೋತ್ರ ಮಾಡುವ ಸರ್ವೋತ್ಕೃಷ್ಟರಾದ ರಾಮಾನುಜರು ನನ್ನ ಹೃದಯವನ್ನು ಯಾವಾಗಲೂ ಬಿಡದೆ ತುಂಬಿಕೊಂಡಿರುವರು. ಅದರಿಂದ ಪರಮಪದ ಪ್ರಾಪ್ತಿಗೋಸ್ಕರ ಶರೀರ ಕ್ಲೇಶಗಳನ್ನು ಮಾಡಿಕೊಂಡು ಸಾಧನಾನುಷ್ಠಾನಗಳನ್ನು ಮಾಡುವುದನ್ನು ವ್ಯರ್ಥವೆಂದು ಬಿಟ್ಟಿರುವೆನು.

ಮತ್ತೊಂದು ರೀತಿಯ ಅರ್ಥ :

**ವೆಂಗಾನಮುಮ್ ಕಲ್ಲುಮ್ ಕಡಲುಮೆಲ್ಲಾಮ್ ಕೊದಿಕ್ಕ**—ತಮ್ಮ ತಪಸ್ಸಿನ ಉಗ್ರತೆಯನ್ನು ವನ, ಪರ್ವತ, ಸಮುದ್ರಗಳು ಕಂಡು ಪರಿತಪಿಸುವಂತೆ ಮಾಡುವುದನ್ನು ಬಿಟ್ಟಿರುತ್ತೇನೆ. ಕೊಲ್ಲಿಕಾವಲನ್ ಶೊಲ್ ಪದಿಕ್ಕುಂ ಕಲೈಕ್ಕವಿ–ಕುಲಶೇಖರಾಳ್ವಾರರ ಶ್ರೀಸೂಕ್ತಿಗಳಲ್ಲಿ ಅಂತರ್ಗತವಾಗಿರುವ ಶಾಸ್ತ್ರಮಯ ಪ್ರಬಂಧವನ್ನು ಗಾನ ಮಾಡುವ ಮಹನೀಯರು ಎಂದು.

**ಶೋರಾದ ಕಾದಲ್ ಪೆರುಮ್ ಶುಳಿಪ್ಪಾಲ್,**
**ತೊಲ್ಲೈಮಾಲೈಯೊನ್ರುಮ್**
**ಪಾರಾದವನೈಪ್ಪಲ್ಲಾಂಡೆನ್ರು ಕಾಪ್ಪಿಡುಮ್,**
**ಪಾನ್ಮೈಯನ್ ತಾಳ್**
**ಪೇರಾದ ಉಳ್ಳತ್ತಿರಾಮಾನುಶನ್ ತನ್ ಪಿರಂಗಿಯ ಶೀರ್**
**ಶಾರಾಮನಿಶರೈಚ್ಚೇರೇನ್, ಎನಕ್ಕೆನ್ನ ತಾಳ್ವಿನಿಯೇ.** 15

ಶೋರಾದ—ವ್ಯಭಿಚಾರವಿಲ್ಲದ, (ಇಲ್ಲವೇ ಸಂಕೋಚಿಸದೆ ಸಂಪೂರ್ಣವಾದ), ಕಾದಲ್—ಭಕ್ತಿಯೆಂಬ ಪ್ರವಾಹದಲ್ಲಿ, ಪೆರುಮ್—ಶುದ್ಧವಾದ, ಶುಳಿಪ್ಪಾಲ್—ಸುಳಿಯಲ್ಲಿ ಸಿಕ್ಕಿರುವಾಗ, ಶೊಲ್ಲೈ—ನಿತ್ಯನಾದ, ಮಾಲೈ—ಸರ್ವರಕ್ಷಕನಾದ, ಒನ್ರುಮ್—ಸ್ವಲ್ಪವಾದರೂ, ಪಾರಾದು—ವಿಚಾರಿಸದೆ, ಅವನೈ—ಆ ಸರ್ವೇಶ್ವರನನ್ನು ಕುರಿತು, ಪಲ್ಲಾಂಡು ಎನ್ರು—ಶಾಶ್ವತವಾಗಿ ಬಾಳು ಎಂದು, ಕಾಪ್ಪಿಡುಮ್—ಮಂಗಳಾಶಾಸನವನ್ನು ಮಾಡಿದ, ಪಾನ್ಮೈಯನ್—ತಮ್ಮ ಸ್ವಭಾವಕ್ಕೆ ಸಂದ ಪೆರಿಯಾಳ್ವಾರ್‌ರ್ರ, ತಾಳ್—ತಿರುವಡಿಗಳನ್ನು, ಪೇರಾದ—ಬಿಡದೆ ಇರುವ, ಉಳ್ಳತ್ತು—ಹೃದಯವುಳ್ಳ, ಇರಾಮಾನುಶನ್‌ತನ್—ರಾಮಾನುಜರ ಯಾವ, ಪಿರಂಗಿಯ—ಅಧಿಕವಾದ, ಶೀರ್—ದಿವ್ಯಗುಣಗಳನ್ನು, ಶಾರಾ—ತಮಗೆ ರಕ್ಷೆಯೆಂದು ತಿಳಿಯದ, ಮನಿಶರೈ—ಮನುಷ್ಯರನ್ನು, ಶೇರೇನ್—ಸೇರುವುದಿಲ್ಲ, ಇನಿ—ಈ ಸ್ಮರಣೆ ಬಂದೊಡನೆ, ಎನಕ್ಕು—ನನಗೆ, ಎನ್ನತಾಳ್ವು—ಕೊರತೆಯೇನಿದೆ.

ಪೆರಿಯಾಳ್ವಾರರು ಪಾಂಡ್ಯ ಮಹಾರಾಜನ ಸಭೆಯಲ್ಲಿ, ಪರತತ್ವ ನಿರ್ಣಯವನ್ನು ಮಾಡಿದಾಗ, ಆ ರಾಜನು ಸಂತುಷ್ಟಾಂತರಂಗನಾಗಿ ಇವರನ್ನು ಬಹುವಿಧವಾಗಿ

ಸನ್ಮಾನಿಸಿ ಆನೆಯ ಮೇಲೆ ಕೂರಿಸಿ ನಗರ ಪ್ರದಕ್ಷಿಣೆ ಮಹೋತ್ಸವವನ್ನು ನಡೆಸಿದಾಗ ಇವರನ್ನು ಕಟಾಕ್ಷಿಸುವುದಕ್ಕೋಸ್ಕರ, ಶ್ರೀ, ಭೂದೇವಿಯರ ಸಮೇತನಾಗಿ ಗರುಡಾ ರೂಢನಾಗಿ ಸರ್ವೇಶ್ವರನು ಕಾಣಿಸಿಕೊಳ್ಳಲು, ಭಗವಂತನ ಸರ್ವರಕ್ಷಕತ್ವಾದಿ ಕಲ್ಯಾಣ ಗುಣಗಳನ್ನು ಅರಿತಿದ್ದರೂ ಪ್ರೇಮಪರವಶರಾಗಿ, ಆ ಸುಂದರನಾದ ದಿವ್ಯಮಂಗಳ ಮೂರ್ತಿಗೆ ದೃಷ್ಟಿದೋಷವೇನಾದರೂ ಸಂಭವಿಸೀತೇ ಎಂಬ ಭೀತಿ ಪಟ್ಟವರಾಗಿ, ಮಕ್ಕಳಿಗೆ ಹಿರಿಯರು ಆಶೀರ್ವದಿಸಿ ರಕ್ಷೆ ನೀಡುವಂತೆ, ಮಂಗಳಾಶಾಸನವನ್ನು ಮಾಡಿ "**ತಿರುಪ್ಪಲ್ಲಾಂಡು**" ಹೇಳಿದ ಯಾವ ಪೆರಿಯಾಳ್ವಾರರ ಶ್ರೀಪಾದಗಳನ್ನು ಯಾವಾಗಲೂ ತಮ್ಮ ಹೃದಯದಲ್ಲಿ ಧ್ಯಾನಿಸುವ ರಾಮಾನುಜರ ಗುಣಾನುಭವವಿಲ್ಲದ ಮನುಷ್ಯರ ಕೂಡೆ ತಾನು ಇರುವುದಿಲ್ಲವಾದುದರಿಂದ ನನಗಿನ್ನು ಯಾವ ಕೊರತೆಯೂ ತೋರದು ಎನ್ನುತ್ತಾರೆ ಈ ಪಾಶುರದಲ್ಲಿ ತಿರುವರಂಗತ್ತ ಮುದನಾರ್ ಅವರು.

**ತಾಳ್ವೊನ್ರಿಲ್ಲಾಮರೈತಾಳ್‌ನ್ದು, ತಲಮುಳುದುಮ್ ಕಲಿಯೇ**
**ಆಳ್‌ಗಿನ್ರನಾಳ್ ವನ್ದಳಿತ್ತವನ್ ಕಾಣ್ಮಿನ್, ಅರಂಗರ್ ಮೌಲಿ**
**ಶೂಳ್‌ಗಿನ್ರಮಾಲೈಯೈಚ್ಚೂಡಿಕೊಡುತ್ತವಳ್ ತೊಲ್ಲರುಳಾಲ್**
**ವಾಳ್‌ಗಿನ್ರವಳ್ಳಲ್, ಇರಾಮಾನುಶನೆನ್ನುಮ್**
**ಮಾಮುನಿಯೇ.** 16

ಅರಂಗರ್–ಶ್ರೀರಂಗನಾಥನ, ಮೌಲಿ–ಶಿರಸ್ಸಿನಲ್ಲಿ, ಶೂಳ್ಕಿನ್ರ–ಸಮರ್ಪಿಸಲಿರುವ, ಮಾಲೈಯೈ–ಪುಷ್ಪಮಾಲಿಕೆಯನ್ನು, ಶೂಡಿ–ತನ್ನ ತಲೆಯಲ್ಲಿ ಮುಡಿದುಕೊಂಡು, ಕೊಡುತ್ತವಳ್–ಆ ಶ್ರೀರಂಗನಾಥನಿಗೆ ಕೊಡುತ್ತಿದ್ದ ಗೋದಾದೇವಿ (ಆಂಡಾಳ್) ಅವರಲ್ಲಿ, ತೊಲ್–ಸ್ವಾಭಾವಿಕವಾದ, ಅರುಳಾಲ್–ಕೃಪೆಯ ಆಧಾರದಿಂದಲೇ, ವಾಳ್‌ಗಿನ್ರ–ಸುಖಿಸುವ, ವಳ್ಳಲ್–ಪರಮ ಉದಾರಿಗಳಾದ, ಮಾಮುನಿಯೆನ್ನುಮ್–ಯತೀಶ್ವರರಿಗೆ ರಾಜನೆಂದು ಪ್ರಸಿದ್ಧಿ ಹೊಂದಿರುವ, ಇರಾಮಾನುಶನ್–ರಾಮಾನುಜರು, ಒನ್ರು–ತನ್ನಲ್ಲಿ ಯಾವ ವಿಧವಾದ, ತಾಳ್ವು–ಕೊರತೆ, ಇಲ್ಲಾ–ಇಲ್ಲದ, ಮರೈ–ವೇದವೆಂಬುದು, ತಾಳ್‌ನ್ದು–(ಬಾಹ್ಯ ಕುದೃಷ್ಟ್ಯಾದಿ ಮತಸ್ಥರಿಂದ) ವ್ಯಾಪಕವಾಗಿರದ, ತಲಮುಳುದುಮ್–ಭೂಮಂಡಲವೆಲ್ಲವೂ, ಕಲಿಯೇ–ಕಲಿಪುರುಷನೇ, ಆಳ್‌ಗಿನ್ರ–ಆಕ್ರಮಿಸಿಕೊಂಡು ದರ್ಬಾರು ಮಾಡುತ್ತಿರುವ, ನಾಳ್–ಕಾಲದಲ್ಲಿ, ವನ್ದು–ಅವತರಿಸಿ, ಅಳಿತ್ತವನ್–ಪರಿಪಾಲಿಸಿದವರು, ಕಾಣ್ಮಿನ್–ಕಂಡುಕೊಳ್ಳಿ.

ಪೆರಿಯಾಳ್ವಾರರ ಮಗಳು ಆಂಡಾಳ್ ತನಗೆ ಒಪ್ಪುವಂತಹ, ಮುಡಿದುಕೊಂಡ ಪುಷ್ಪಮಾಲಿಕೆಯನ್ನು ಶ್ರೀರಂಗನಾಥನು ಪ್ರೀತಿಯಿಂದ ಮುಡಿದುಕೊಳ್ಳುವನು ಎಂದು ಭಾವಿಸಿ ಅನುಸರಿಸುತ್ತಿದ್ದ ಆ ಮಹಾ ತಾಯಿಯ ಪರಮ ಕೃಪೆಯಿಂದ ವೃದ್ಧಿ

ಹೊಂದುತ್ತಿದ್ದ ಯತಿರಾಜರು, ಅಪೌರುಷೇಯವೂ, ಸ್ವತಃ ಪ್ರಮಾಣವೂ, ಭ್ರಮಾದಿ ದೋಷ ರಹಿತವೂ, ಸರ್ವೋತ್ಕೃಷ್ಟವೂ ಆಗಿ ಪ್ರಕಾಶಿಸುವುದು ವೇದವು ಆದರೂ ಬಾಹ್ಯ ಕುದೃಷ್ಟಿ ಪಾಷಂಡರ ಕೈಲಿ, ಕಲಿದೋಷದಿಂದ ತಿರಸ್ಕಾರ ಹೊಂದಿ ಕೆಡಿಸಿರುವ ಸಮಯದಲ್ಲಿ, ಅಂತಹ ಕುಮತಸ್ಥರೆಲ್ಲರನ್ನೂ ಎಲ್ಲರೀತಿಯಲ್ಲೂ ಖಂಡಿಸಿ, ವೇದಮಾರ್ಗವನ್ನು ಲೋಕದಲ್ಲೆಲ್ಲಾ ಪ್ರತಿಷ್ಠೆ ಮಾಡಿ, ಚೇತನರನ್ನು ತಮ್ಮ ನಿರ್ಹೇತುಕ ಕೃಪೆಯಿಂದ ಸಂರಕ್ಷಿಸಿ ಉದ್ಧರಿಸಿದರು. ಅದರಿಂದ ಲೌಕಿಕರೇ ಅಂತಹ ಮಹನೀಯರನ್ನಾಶ್ರಯಿಸಿ.

**ಮುನಿಯಾರ್ ತುಯರಂಗಳ್ ಮುನ್ದಿಲುಮ್,**
**ಇನ್ಬಂಗಳ್ ಮೊಯ್ತ್ತಿಡಿನುಮ್**
**ಕನಿಯಾರ್ ಮನಮ್ ಕಣ್ಣಮಂಗೈನಿನ್ರಾನೈ,**
**ಕ್ಕಲೈಪ್ಪುರವುಮ್**
**ತನಿಯಾನೈಯ್ತಂಡಮಿಳ್ ಶೆಯ್ದನೀಲನ್ ತನಕ್ಕುಲಗಿಲ್**
**ಇನಿಯಾನೈ ಎಂಗಳಿರಾಮಾನುಶನೈವನ್ದೆಯ್ದಿನರೇ.** 17

ಕಲೈ–ಸಕಲಶಾಸ್ತ್ರಗಳಿಂದ, ಪುರವುಮ್–ಸ್ತುತಿಸಲ್ಪಡುವವನು, ತನಿ–ಅದ್ವಿತೀಯವಾದ, ಆನೈಯ್ಯ–ಮದಗಜದಂತೆ ಗಂಭೀರ ಸ್ವಭಾವವುಳ್ಳವನು, ಕಣ್ಣಮಂಗೈ–ತಿರುಕ್ಕಣ್ಣಪುರವೆಂಬ ದಿವ್ಯದೇಶದಲ್ಲಿ, ನಿನ್ರಾನೈ–ನಿಂತು ಸೇವೆಯನ್ನು ಪಡೆಯುತ್ತಿರುವವನ (ಸರ್ವೇಶ್ವರನ), ತಣ್–ತಂಪಾದ (ತಾಪಹರನಾಗಿ), ತಮಿಳ್–ದ್ರಾವಿಡ ದಿವ್ಯ ಪ್ರಬಂಧಗಳನ್ನು, ಶೆಯ್ದ–ಮಾಡಿದ, ನೀಲನ್‌ತನಕ್ಕು–ತಿರುಮಂಗೈ ಆಳ್ವಾರರಿಗೆ, ಉಲಗಿಲ್–ಜಗತ್ತಿನಲ್ಲಿ, ಇನಿಯಾನ್–ಇಷ್ಟವುಳ್ಳವರೇ, ಎಂಗಳ್–ನಮಗೆ ನಾಥರಾದ, ಇರಾಮಾನುಶನೈ–ರಾಮಾನುಜರನ್ನು, ವಂದು–ಬಂದು, ಎಯ್ದಿನರ್–ಆಶ್ರಯಿಸಿದವರ, ತುಯರಂಗಳ್–ದುಃಖಗಳು, ಮುನ್ದೀಲುಮ್–ಮೇಲಾಯ್ದು ಬಂದರೂ, ಮುನಿಯಾರ್–ಯೋಚಿಸದಲೇ, ಇನ್ಬಂಗಳ್–ಸುಖ ವಾಗುತ್ತವೆ, ಮೊಯ್ತ್ತಿಡಿನುಮ್–ಪರಿಪೂರ್ಣವಾಗಿ ಕೂಡಿಬಂದರೂ, ಮನಮ್ ಕನಿಯಾರ್–ಅತಿಶಯವಾಗಿ ಸಂತೋಷಿಸರು.

ಸಕಲಶಾಸ್ತ್ರ ಪ್ರತಿಪಾದಕನು, ಗಂಭೀರ ಸ್ವಭಾವದವನ್ನೂ, ಆಶ್ರಿತ ರಕ್ಷಕನೂ ಭಕ್ತವತ್ಸಲನೂ ಎಂಬ ಖ್ಯಾತನಾಮಗಳನ್ನು ಹೊಂದಿರುವ, ತಿರುಕ್ಕಣ್ಣಪುರದಲ್ಲಿ ಸೇವೆಪಡೆದುಕೊಳ್ಳುತ್ತಿರುವ ಸರ್ವೇಶ್ವರನ, ಯಾವ ಕಲ್ಯಾಣ ಗುಣಗಳನ್ನು ಪ್ರತಿಪಾದಿಸಲು ತಿರುಮೊಳಿ ಮೊದಲಾದ ದಿವ್ಯಪ್ರಬಂಧಗಳನ್ನು ಸಕಲ ಜೀವರು ಉದ್ಧಾರವಾಗಲು ಕರುಣಿಸಿ ಉಪಕಾರ ಮಾಡಿರುವ, ತಿರುಮಂಗೈ ಆಳ್ವಾರ್ ಅವರ

ಬಗ್ಗೆ ಅತ್ಯಂತ ಪ್ರಾವಣ್ಯ ಉಳ್ಳವರಾಗಿರುವ, ಎಂಬೆರುಮಾನರನ್ನು ಆಶ್ರಯಿಸಿದ ಮಹನೀಯರು, ಎಂತಹ ಕಷ್ಟಸುಖಗಳು ಸಂಭವಿಸಿದರೂ ಮನಶ್ಶಾಂತಿಯನ್ನು ಕಳೆದುಕೊಳ್ಳದೆ ಗಂಭೀರ ಸ್ವಭಾವದವರಾಗುತ್ತಾರೆ.

**ಎಯ್‍ದರ್ಕರಿಯಮಱೈಗಳೈ, ಆಯಿರವಿನ್ದಮಿೞಾಲ್**
**ಶೆಯ್‍ದರ್ಕುಲಗಿಲ್ ವರುಂ ಶಡಕೋಪನೈ, ಚ್ಚಿನ್ದೈಯುಳ್ಳೇ**
**ಪೆಯ್‍ದರ್ಕಿಶೈಯುಮ್ ಪೆರಿಯವರ್**
**ಶೀರ್ಕೈಯುಯಿರ್‌ಗಳೆಲ್ಲಾಮ್**
**ಉಯ್‍ದರ್ಕುದವುಮ್,**
**ಇರಾಮಾನುಶನೆಮ್ಮುರುದುಣೈಯೇ.** 18

ಎಯ್‍ದರ್ಕು–ಲಭಿಸಲು (ಅರ್ಥ ತಿಳಿದುಕೊಳ್ಳಲು), ಅರಿಯ–ಶಕ್ತಿಯಾಗಲೀ, ಮಱೈಕಳೈ–ವೇದಗಳನ್ನು, ಆಯಿರಮ್–ಸಾವಿರ ಪಾಶುರಗಳಲ್ಲಿ, ಇನ್–ರಸಭರಿತವಾಗಿ, ತಮಿೞಾಲ್–ತಮಿಳು ಭಾಷೆಯಲ್ಲಿ, ಶೆಯ್‍ದರ್ಕು–ರಚಿಸಿ ಉಪಕರಿಸಲಿಕ್ಕಾಗಿ, ಉಗಿಲ್–ಲೋಕದಲ್ಲಿ, ವರಮ್–ಬಂದು ಅವತರಿಸಿದ, ಶಡಕೋಪನೈ–ನಮ್ಮಾೞ್ವಾರ ರನ್ನು, ಶಿಂದೈಯುಳ್ಳೇ–ಹೃದಯದಲ್ಲಿಯೇ, ಪೆಯ್‍ದರ್ಕು–ಇಟ್ಟುಕೊಳ್ಳಲು, ಇಶೈಯುಮ್–ಸಮ್ಮತಿಸಿದ, ಪೆರಿಯವರ್–(ಹೆಚ್ಚಿನ ಮತ್ತು) ಪೂಜನೀಯರಾದ ಮಧುರ ಕವಿಗಳ ಯಾವ, ಶೀರ್ೈ–ಜ್ಞಾನ ಭಕ್ತ್ಯಾದಿ ಗುಣಗಳನ್ನು, ಉಯಿರ್ ಗಳೆಲ್ಲಾಮ್–ಸಕಲಾತ್ಮರುಗಳೆಲ್ಲಾ, ಉಯ್‍ದರ್ಕು–ಕಡೆಹಾಯಲು, ಉದವುಮ್–ಉಪಕಾರ ಮಾಡುತ್ತಿರುವ, ಇರಾಮಾನುಶನ್–ಎಂಬೆರುಮಾನಾರ್ ಅವರೇ, ಎಮ್–ನನಗೆ, ಉರುತುಣೈ–ದೃಢವಾದ ಸಹಾಯವು.

ಅನಂತವಾದ, ಅತಿಶಯವಾದ ಜ್ಞಾನವಂತರು ಮಾತ್ರ ತಿಳಿದುಕೊಳ್ಳಬಲ್ಲ, ಎಲ್ಲರೂ ಉಪಯೋಗಿಸಲಾಗದ, ವಿಪ್ರ, ಕ್ಷತ್ರಿಯ ಮತ್ತು ವೈಶ್ಯರೆಂಬ ತ್ರೈವರ್ಣಿಕರಿಗೆ ಮಾತ್ರವೇ ಅಧ್ಯಯನಾಧಿಕಾರವಿರುವ ಸಂಸ್ಕೃತ ವೇದಗಳ ಎಲ್ಲ ಸಾರಾಂಶ ವನ್ನೂ, ವರ್ಣ ನಿಯಮವೇ ಇಲ್ಲದಂತಹ, ಆಸಕ್ತಿಯುಳ್ಳ ಯಾರು ಬೇಕಾದರೂ ಅಧ್ಯಯನ ಮಾಡಲು ಅನುವು ಮಾಡಿ, ದ್ರಾವಿಡ ಭಾಷೆಯಲ್ಲಿ ಸಾವಿರ ಪಾಶುರಗಳುಳ್ಳ ತಿರುವಾಯ್ಮೊೞಿ ಮತ್ತು ಇತರ ದಿವ್ಯ ಪ್ರಬಂಧಗಳನ್ನು ಕರುಣಿಸಿ, ಸಕಲ ಚೇತನರನ್ನೂ ಉದ್ಧಾರಮಾಡಲೆಂದೇ ಭೂಲೋಕದಲ್ಲಿ ಅವತರಿಸಿ, ಇತರ ಮತಗಳನ್ನು ಧ್ವಂಸಮಾಡಿ, ವೈದಿಕ ಮಾರ್ಗವನ್ನು ಪ್ರತಿಷ್ಠಾಪಿಸಿದ ಜ್ಞಾನ ಸ್ವರೂಪರಾದ ನಮ್ಮಾೞ್ವಾರರನ್ನೇ ತಮಗೆ ಉತ್ಕೃಷ್ಟದೈವ ಎಂದು ಭಾವಿಸಿದ ಯಾವ ಮಧುರಕವಿ ಆೞ್ವಾರರ, ಜ್ಞಾನ ಭಕ್ತಿ ವೈರಾಗ್ಯಾದಿ ದಿವ್ಯಗುಣಗಳನ್ನು, ಸಕಲ ಚೇತನರಿಗೆ ಉಪದೇಶಿಸಿ ಉದ್ಧಾರ ಮಾಡುತ್ತಿರುವ ಎಂಬೆರುಮಾನರೇ ನನಗೆ ಸಕಲ ವಿಧ ಸಹಾಯ ಭೂತರಾಗಿದ್ದಾರೆ.

**ಉರುಪೆರುಮ್ ಶೆಲ್ವಮುಮ್ ತನ್ದೈಯುಮ್ ತಾಯುಮ್,**
**ಉಯರ್ ಕುರುವುಮ್**
**ವೆರಿದರು ಪೂಮಗಳ್ ನಾದನುಮ್, ಮಾರನ್ ವಿಳಂಗಿಯಶೀರ್**
**ನೆರಿದರುಮ್ ಶೆನ್ದಮಿಳಾರಣಮೇಯೆನ್ರಿನ್ನಿಣಿಲತ್ತೋರ್**
**ಅರಿದರನಿನ್ರ, ಇರಾಮಾನುಶನೆನಕ್ಕಾರಮುದೇ.** 19

ಉರು–ಪ್ರಾಪ್ಯ ಪ್ರಾಪಕಗಳಾಗಿರಲು ಶ್ಲಾಘ್ಯವಾದ, ಪೆರುಮ್–ನಿರವಧಿಕವಾದ, ಶೆಲ್ವಮುಮ್–ಸಂಪತ್ತನ್ನು, ತನ್ದೈಯುಮ್–ತಂದೆಯು, ತಾಯುಮ್–ತಾಯಿಯೂ, ಉಯರ್‌ಗುರುವುಮ್–(ಆತ್ಮೋಜ್ಜೀವನಕರವಾದವುಗಳಿಗೆಲ್ಲಾ ಅರ್ಥವನ್ನುಪದೇಶಿಸಿದ) ಪರಮ ಆಚಾರ್ಯರನ್ನು, ವೆರಿದರು–ವಿಕಸಿತವಾಗಿ ಪರಿಮಳ ಬೀರುತ್ತಿರುವ, ಪೂಮಗಳ್–ತಾವರೆ ಪುಷ್ಪದಲ್ಲವತರಿಸಿದ ಯಾವ ಶ್ರೀ ಮಹಾಲಕ್ಷ್ಮಿಯು, ನಾದನುಮ್–ಪತಿಯಾದ ಸರ್ವೇಶ್ವರನು, ಮಾರನ್–ನಮ್ಮಾಳ್ವಾರರು, ವಿಳಂಗಿಯ–ಭಗವದನುಗ್ರಹದಿಂದ ತಮಗೆ ಪ್ರಕಾಶಿಸಿದ, ಶೀರ್–ಪರಮ ಭಕ್ತ್ಯಾದಿ ಸ್ವಭಾವಗಳನ್ನು, ನೇರಿ–ಸಕ್ರಮವಾಗಿ, ತರುಮ್–ಉಪಕರಿಸಿ ಕೃಪೆಮಾಡಿದ, ಶೆಮ್–ಸುಂದರವಾದ, ತಮಿಳ್ ಆರಣಮೇಯನ್ರು–ದ್ರಾವಿಡವೇದವೆಂದೇ ಹೆಸರಾದ, ಇನ್ನೀಣಿಲತ್ತೋರ್–ಈ ಮಹತ್ತರವಾದ ಭೂಲೋಕದವರಿಗೆ, ಅರಿದರನಿನ್ರ–ತಿಳಿಯುವಂತೆ ಮಾಡಿದ, ಇರಾಮಾನುಶನ್–ಎಂಬೆರುಮಾನರು, ಎನಕ್ಕು–ನನಗೆ, ಆರಮುದು–ನಿರತಿಶಯ ಭೋಗ್ಯರಾದವರು.

ಇಹಲೋಕದಲ್ಲಿ ಮಾತ್ರ ಉಪಯೋಗಕ್ಕೆ ಬರುವ ಹಣ, ಐಶ್ವರ್ಯ ಮತ್ತು ವಿದ್ಯೆಗಳನುಳ್ಳವರಿಗೆ, ಅತಿಶಯವಾದ ಮಹಿಮೆಯುಳ್ಳ, ಇಹ ಮತ್ತು ಪರ ಎರಡಕ್ಕೂ ಸಾಧಕವಾಗುವ ತಿರುವಾಯ್ಮೊಳಿಯ ಯಾವ ಮಹಿಮೆಯನ್ನು ಹೇಳಲು ಶಕ್ತಿಯಿಲ್ಲವೋ, (ಇಹಲೋಕ, ಪರಲೋಕದ ಐಶ್ವರ್ಯವೆಲ್ಲವೂ, ಸರ್ವವಿಧ ಬಂಧುವೂ, ಆತ್ಮನಾಥನಾದ ಶ್ರಿಯಃಪತಿಯು ಎಂದು) ನಮ್ಮಾಳ್ವಾರರು ತಮಗೆ ಭಗವನ್ನಿರ್ಹೇತುಕ ಕೃಪೆಯಿಂದ ಕರುಣಿಸಿರುವ ಅರ್ಥವಿಶೇಷಗಳನ್ನು ಸಕ್ರಮವಾಗಿ ಹೇಳಿರುವುದು ದ್ರವಿಡೋಪನಿಷತ್ತೆಂದೇ ಹೆಸರಾಗಿರುವ ತಿರುವಾಯ್ಮೊಳಿಯೇ ಆಗಿದೆ, ಎಂದು ಸಕಲ ಚೇತನರಿಗೆ ಉಪದೇಶಿಸಿದ ಮಹಾತ್ಮರಾದ ಎಂಬೆರುಮಾನರು, ನಾನು ಎಷ್ಟು ಅನುಭವಿಸಿದರೂ ತೃಪ್ತಿಯಾಗದ ಅಮೃತವಾಗಿದ್ದಾರೆ.

**ಆರಪ್ಪೊಳಿಲ್ ತೆನ್ಕುರುಗೈಪ್ಪಿರಾನ್, ಅಮುದತ್ತಿರುವಾಯ್**
**ಈರ ತ್ತಮಿಳಿನ್ ಇಶೈಯುಣರ್ನ್ದೋರ್ಗಟ್ಕು,**
**ಇನಿಯವರ್ದಮ್**
**ಶೀರೈಪ್ಪಯಿನ್ರುಯ್ಯುಮ್ ಶೀಲಂಗೊಳ್**
**ನಾದಮುನಿಯೈನೆಂಗಾಲ್**
**ವಾರಿಪ್ಪರುಗುಮ್, ಇರಾಮಾನುಶನೆನ್ದನ್ ಮಾನಿದಿಯೇ.** 20

ಆರಮ್–ಚಂದನದ ಮರಗಳಿಂದ ಕೂಡಿದ, ಪೊಳಿಲ್–ತೋಟಗಳನ್ನುಳ್ಳ, ತೆನ್–ನೋಡಲು ರಮ್ಯವಾಗಿರುವ, ಕುರುಗೈ–ಕುರಿಕಾಪುರಿ(ಆಳ್ವಾರ್ ತಿರುನಗರಿ)ಗೆ, ಪಿರಾನ್–ಸ್ವಾಮಿಯಾಗಿರುವ ನಮ್ಮಾಳ್ವಾರರ, ಅಮುದಮ್–ಅಮೃತದಂತಿರುವ, ತಿರು–ದಿವ್ಯವಾದ, ವಾಯ್–ವಾಣಿಯಿಂದ ಹೊರಬಂದ, ಈರಮ್–ಕೇಳಲು ಮತ್ತು ಅಧ್ಯಯನ ಮಾಡಲು ಉತ್ತಮವಾದ, ತಮಿಳಿನ್–ದ್ರಾವಿಡ ಭಾಷೆಯಲ್ಲಿನ ತಿರುವಾಯ್ಮೊಳಿಯಲ್ಲಿನ ಯಾವ, ಇಶೈ–ಸ್ವರಗಳ ಏರಿಳಿತಗಳನ್ನು, ಉಣರ್ನ್ದೋರ್ಗಟ್ಕು–ಅರಿತುಕೊಂಡವರೂ, ಇನಿಯವರ್ದಮ್–ಪ್ರೀತಿಗೆ ಪಾತ್ರರಾದವರೂ, ಶೀರೈ–ಗುಣಾತಿಶಯಗಳನ್ನು, ಪಯಿನ್ರು–ಅನುಸಂಧಾನ ಮಾಡಿ, ಉಯ್ಯುಮ್–ಕೃತಾರ್ಥರಾದ, ಶೀಲಂಗೊಳ್–ಉತ್ತಮ ಗುಣಗಳಿಂದ ಕೂಡಿದ, ನಾದಮುನಿಯೈ–ಶ್ರೀಮನ್ನಾಥಮುನಿಗಳನ್ನು, ನೆಂಗಾಲ್–ತಮ್ಮ ಮನಸ್ಸಿನಲ್ಲಿ, ವಾರಿಪ್ಪರುಗುಮ್–ಪ್ರೇಮಾದರಗಳಿಂದ ಅನುಭವಿಸಿದ, ಇರಾಮಾನುಶನ್–ರಾಮಾನುಜರು, ಎನ್ದನ್–ನನಗೆ, ಮಾ–ಮಹತ್ತರವಾದ, ನಿದಿ–ನಿಕ್ಷೇಪದಂತೆ ಇರುವುದು.

ಶ್ರೀಗಂಧದ ಮರಗಳಿಂದ ಕೂಡಿದ ತೋಟಗಳನ್ನುಳ್ಳ ರಮಣೀಯವಾದ ಕುರುಕಾಪುರಾಧೀಶರೂ, ನಮಗೆ ಮಹೋಪಕಾರಿಗಳೂ ಆದ ನಮ್ಮಾಳ್ವಾರರು ಕರುಣಿಸಿದ ಮತ್ತು ಕೇಳಲು, ಹೇಳಲು ರಮ್ಯವಾದ (ಕೇಳಿದವರ ಮತ್ತು ಹೇಳಿದವರ ಸಕಲ ತಾಪತ್ರಯಗಳನ್ನೂ ನಿವಾರಿಸುವಂತಹ), ಶೈತ್ಯ ಮಾಧುರ್ಯವನ್ನು ಉಳ್ಳ ತಿರುವಾಯ್ಮೊಳಿಯನ್ನು, ಅರ್ಥವತ್ತಾಗಿ ಅಭ್ಯಾಸ ಮಾಡಿದ, ಮಧುರಕವಿಗಳು, ತಿರುಮಂಗೈ ಆಳ್ವಾರ್ ಅವರೇ ಮೊದಲಾದ ಮಹಾತ್ಮರುಗಳ ಕಲ್ಯಾಣಗುಣಗಳನ್ನು ಅನುಭವಿಸಿದ ಶ್ರೀಮನ್ನಾಥಮುನಿಗಳವರ ಯಾವ ದಿವ್ಯ ಗುಣಾನುಭವವನ್ನು ಸದಾ ಕಾಲ ಪಡೆದಿರುವ ರಾಮಾನುಜರೇ ನನಗೆ ಮಹತ್ತರವಾದ ನಿಧಿಯು.

ನಿದಿಯೈಪ್ಪೊಳಿಯುಮ್ ಮುಗಿಲೆನ್ರು,
ನೀಶರ್‌ದಮ್ ವಾಶಲ್‌ಪತ್ತಿ
ತ್ತುದಿಗತ್ತುಲಗಿಲ್ ತುವಳ್‌ಗಿನ್ರಿಲೇನ್,
ಇನಿತ್ತೂಯ್ ನೆರಿಶೇರ್
ಎದಿಗಟ್ಕಿರೈವನ್ ಯಮುನೈತ್ತುರೈವನ್
ಇಣೈಯಡಿಯಾರ್
ಕದಿಪೆತ್ತುಡೈಯ, ಇರಾಮಾನುಶನ್ ಎನ್ನೈಕ್ಕಾತ್ತನನೇ. 21

ತೂಯ್–ಪರಿಶುದ್ಧವಾದ, ನೆರಿ–ಸಾಧನಾನುಷ್ಠಾನಗಳಿಂದ, ಶೇರ್–ಕೂಡಿರುವ, ಎದಿಗಟ್ಕು–ಸನ್ಯಾಸಿಗಳಿಗೆ, ಇರೈವನ್–ನಾಥರಾದ, ಯಮುನೈತ್ತುರೈವನ್–ಆಳವಂದಾರರ ಯಾವ, ಇಣೈ–ಕೂಡಿರುವ, ಅಡಿಯಾರ್–ಶ್ರೀಪಾದಗಳಂತೆ, ಕದಿ–ಪುರುಷಾರ್ಥಗಳನ್ನು, ಪೆತ್ತುಡೈಯ–ಲಭಿಸಿರುವ, ಇರಾಮಾನುಶನ್–ರಾಮಾನುಜರು, ಎನ್ನೈ–ನನ್ನನ್ನು, ಕಾತ್ತನನ್–ಕೃಪೆಮಾಡಿ ರಕ್ಷಿಸಿದರು, ಇನಿ–ಇನ್ನು, ನಿದಿಯೈ–ನಿಕ್ಷೇಪಗಳನ್ನು, ಪೊಳಿಯುಮ್ ಮಳೆಕರೆಯುವ, ಮುಗಿಲ್‌ಎನ್ರು–ಮೇಘಗಳಂತೆ (ಅವರ ಔದಾರ್ಯವನ್ನು ಹೇಳುವಂತಹ), ತುದಿಕತ್ತು–ಸ್ತೋತ್ರವನ್ನು ಕಲಿತುಕೊಂಡು, ಉಲಗಿಲ್–ಲೋಕದಲ್ಲಿ, ನೀಶರ್‌ದಮ್–ನೀಚರಾದವರ, ವಾಶಲ್–ಬಾಗಿಲಲ್ಲಿ, ಪತ್ತಿ–ಅವರ ಕೃಪೆಗಾಗಿ ಆಶ್ರಯಿಸಿ, ತುವಳ್‌ಗಿನ್ರಿನೇನ್–ಶ್ರಮಪಡುವವನಾಗುವುದಿಲ್ಲ.

ಪರಿಶುದ್ಧಾನುಷ್ಠಾನಪರರಾದ ಯತೀಶ್ವರರಿಗೆ ನಾಥರೆನಿಸಿದ ಆಳವಂದಾರರ ಪಾದಾರವಿಂದಗಳೇ ಉತ್ತಮ ಪುರುಷಾರ್ಥವೆಂದು ಆಶ್ರಯಿಸಿದ ಎಂಬೆರುಮಾನರು ನನಗೆ ಸಕಲವಿಧ ರಕ್ಷಕರಾಗಿರುವರು, ಆದ್ದರಿಂದ ಇನ್ನುಮೇಲೆ, ಐಶ್ವರ್ಯಾದಿಗಳಿಂದ ದುರಹಂಕಾರಗ್ರಸ್ತರಾಗಿ, ಜ್ಞಾನಶೂನ್ಯರಾಗಿರುವ ಕ್ಷುದ್ರಪ್ರಭುಗಳ ಮನೆಯ ಮುಂದೆ ಅವರನ್ನು ಕಾಣಬಯಸಿ ಕಾಯುವುದಲ್ಲದೆ, ಅಂತಹವರನ್ನು ಉತ್ತಮರೆಂದು ಹೊಗಳುವ ದೀನತ್ವವನ್ನು ಹೊಂದುವ ಕಷ್ಟವನ್ನು ತೆಗೆದುಕೊಳ್ಳಬೇಕಾಗಿಲ್ಲ.

ಕಾರ್ತ್ತಿಗೈಯಾನುಮ್ ಕರಿಮುಗತ್ತಾನುಮ್,
ಕನಲುಮ್ ಮುಕ್ಕಣ್
ಮೂರ್ತ್ತಿಯುಂ ಮೊಡಿಯುಮ್‌ವೆಪ್ಪುಮ್ ಮುದುಗಿಟ್ಟು,
ಮೂವುಲಗುಮ್
ಪೂತ್ತವನೇಯೆನ್ರುಪೋತ್ತಿಡವಾಣನ್ ಪಿಳ್ಳೈಪೊರುತ್ತ
ಶೀರ್ತ್ತನೈಯೇತ್ತುಮ್, ಇರಾಮಾನುಶನೆನ್ದನ್ ಶೇಮವೈಪ್ಪೇ. 22

ಕಾರ್ತಿಗೈಯಾನುಮ್—ಕೃತ್ತಿಕಾ ನಕ್ಷತ್ರ ಜಾತ ಸುಬ್ರಹ್ಮಣ್ಯನು, ಕರಿಮುಗತ್ತಾನುಮ್—ಗಜಮುಖನಾದ ವಿನಾಯಕನು, ಕನಲುಮ್—ಅಗ್ನಿಯು, ಮುಕ್ಕಣ್ ಮೂರ್ತಿಯುಮ್—ಮೂರು ಕಣ್ಣಿನ ರುದ್ರನೂ, ಮೊಡಿಯುಮ್—ದುರ್ಗಿಯೂ, ವೆಪ್ಪುಮ್—ಜ್ವರಾದಿ ದೇವತೆಯೂ, ಮುದಗಿಟ್ಟು—ಮುಖವನ್ನು ತಿರುಗಿಸಿಕೊಂಡು ಓಡುತ್ತಿರಲು, ಮೂವುಲಗಮ್—ಮೂರು ಲೋಕಗಳನ್ನೂ, ಪೂತ್ತವನೇ—ಉದರದಲ್ಲಿ ಅಡಗಿಸಿಕೊಂಡು ರಕ್ಷಿಸಿದವನೇ ಎಂದು, ಪೋತ್ತಿಡ—ಸ್ತೋತ್ರ ಮಾಡಲು, ವಾಣನ್—ಬಾಣಾಸುರನ ಯಾವ, ಪಿಳ್ಳೈ—ತಪ್ಪನ್ನು, ಪೊರುತ್ತ—ಕ್ಷಮಿಸಿದ, ತೀರ್ತ್ತನೈ—ಗುಣಶುದ್ಧಿಯುಳ್ಳ ಸರ್ವೇಶ್ವರನನ್ನು, ಏತ್ತುಮ್—ಸ್ತೋತ್ರವನ್ನು ಮಾಡುವ, ಇರಾಮಾನುಶನ್—ಉಡೈಯವರು, ಎನ್ರನ್—ನನಗೆ, ಶೇಮಮ್—ಆಪದ್ರಕ್ಷಕವಾದ, ವೈಪ್ಪು—ನಿಕ್ಷೇಪವಾಗಿರುವರು.

ಭಯಂಕರವಾದ ಪ್ರಳಯಕಾಲದಲ್ಲಿ ಕಾರ್ತಿಕೇಯ(ಸುಬ್ರಹ್ಮಣ್ಯ), ವಿನಾಯಕ, ಅಗ್ನಿ, ಈಶ್ವರ, ದುರ್ಗಿಯೇ ಮೊದಲಾದ ಎಲ್ಲ ದೇವತೆಗಳೂ ವಿಮುಖರಾಗಿ ಪಲಾಯನ ಮಾಡುತ್ತಿರಲು, ಮೂರು ಲೋಕಗಳನ್ನೂ ಉದರದಲ್ಲಿರಿಸಿಕೊಂಡು ಸಂರಕ್ಷಿಸಿದ ಸರ್ವೇಶ್ವರನೇ ರಕ್ಷಿಸು ಎಂದು ಯಾವ ಬಾಣಾಸುರನು ದೀನನಾಗಿ ಬೇಡಿದಾಗ ಅವನ ತಪ್ಪನ್ನು ಕ್ಷಮಿಸಿದ ಸರ್ವೇಶ್ವರನಾದ ಶ್ರೀಕೃಷ್ಣಪರಮಾತ್ಮನನ್ನು ಸ್ತೋತ್ರಮಾಡುವ ರಾಮಾನುಜರು ನನಗೆ ಆಪದ್ರಕ್ಷಕವಾಗಿರುವ ಆಸ್ತಿಯಾಗಿರುವರು.

**ವೈಪ್ಪಾಯ ವಾನ್ ಪೊರುಳೆನ್ರು, ನಲ್ಲನ್ಬರ್ ಮನತ್ತಗತ್ತೇ**
**ಎಪ್ಪೋದುಮ್ ವೈಕ್ಕುಮಿರಾಮಾನುಶನೈ, ಯಿರುನಿಲತ್ತಿಲ್**
**ಒಪ್ಪಾರಿಲಾದ ವರುವಿನ್ಯೆಯೇನ್ ವಂಗಿನೆಂಗಿಲ್ ವೈತ್ತು**
**ಮುಪ್ಪೋದುಮ್ ನಾಳ್ ತ್ತುವನ್,**
**ಎನ್ನಾವಿದುವವನ್ ನೊಯ್ ಪುಗಳ್ಕ್ಕೇ.** 23

ವೆಪ್ಪಾಯಿ—ಆಪದ್ರಕ್ಷಣಕ್ಕೋಸ್ಕರ ಇಟ್ಟಿರುವ, ವಾನ್—ಅಕ್ಷಯವಾದ, ಪೊರುಳೆನ್ರು—ಸಂಪತ್ತೆಂದು, ನಲ್—ದೋಷಮುಕ್ತರು, ಅನ್ಬರ್—ಪ್ರೇಮವುಳ್ಳ ಭಕ್ತರು, ಮನತ್ತಕತ್ತೇ—ತಮ್ಮ ಮನಸ್ಸಿನಲ್ಲಿ, ಎಪ್ಪೋದುಮ್—ಸದಾಕಾಲವೂ, ವೈಕ್ಕುಮ್—ಇಟ್ಟುಕೊಳ್ಳುವ ವಿಷಯವಾದ, ಇರಾಮಾನುಶನೈ—ರಾಮಾನುಜರನ್ನು, ಇರುನಿಲತ್ತಿಲ್—ಮಹತ್ತರವಾದ ಈ ಭೂಲೋಕದಲ್ಲಿ, ಒಪ್ಪಾರ್—ಪಾಪಾತ್ಮರಲ್ಲಿ ಸಮಾನರು, ಇಲಾದ—ಇಲ್ಲದೆ ಇರುವಂತಹ ಅರುವಿನ್ಯೆಯೇನ್—ಪಾಪಿಷ್ಠನಾಗಿರುವ ನಾನು (ಉರುವಿನ್ಯೆಯೇನ್ ಎಂದು ಪಾಠಾಂತರವಾದರೂ [ಅದಕ್ಕೆ] ಸಂಚಿತವಾದ ಪಾಪವನ್ನು ಭರಿಸಿರುವ ನಾನು ಎಂದು), ವಂಗಿನ್—ಕಪಟವನ್ನು, ನೆಂಗಿಲ್—ಮನಸ್ಸಿ

ನಲ್ಲಿ, ವೈತ್ತು–ಇಟ್ಟುಕೊಂಡು, ಮುಪ್ಪೋದುವನ್–ತ್ರಿಕಾಲಗಳಲ್ಲಿಯೂ, ವಾಳ್ತುವನ್–ಸ್ತೋತ್ರ ಮಾಡುತ್ತಿರುವೆನು, ಇದು–ಈ ರೀತಿ ಪಾಡುತ್ತಿರುವ ನನಗೆ, ಅವನ್–ಆ ರಾಮಾನುಜರ ಯಾವ, ಮೊಯ್–ಅಂದವಾದ (ಇಷ್ಟೇ ಎಂದು ಹೇಳಲಾಗದ), ಪುಗಳ್ಕು–ಯಶಸ್ಸಿಗೆ (ವೈಭವಕ್ಕೆ), ಎನ್ನಾಮ್–ಯಾವ ಹಾನಿಯುಂಟಾಗುವುದೋ !

ಅತ್ಯಂತ ಪರಿಶುದ್ಧರಾದ ಮಹಾತ್ಮರು, ಹೆಚ್ಚಿನ ಪ್ರಾವಣ್ಯದಿಂದ ಉಡೈಯವರನ್ನು ಪರಮ ಧನವೆಂದು ತಮ್ಮ ಹೃದಯ ಮಂದಿರದಲ್ಲಿಟ್ಟುಕೊಳ್ಳುವಂತಹ ವಿಷಯವಿರುವಾಗ, ಅಧಮತಮ ಪಾಪಿಷ್ಠನಾಗಿರುವ ನಾನು, ಕಳಂಕ ತುಂಬಿದ ನೀಚ ಹೃದಯದಲ್ಲಿಟ್ಟುಕೊಂಡು ಸ್ತೋತ್ರ ಮಾಡುತ್ತಿರುವೆನು. ಇಂತಹ ನನ್ನ ದುಸ್ಸಾಹಸದಲ್ಲಿ ನನ್ನ ಸ್ವಾಮಿಯು ಈ ನನ್ನ ಹೃದಯದಲ್ಲಿದ್ದು ಅವಮಾನಿತನಾಗಿರುವನೇನೋ ಎಂದು ಭಯ ಪಡುತ್ತಿರುವೆನು.

**ಮೊಯ್‌ತ್ತವೆನ್ ತೀವಿನೈಯಾಲ್ ಪಲ್ಲುಡಲ್**
**ತೊರುಮ್ ಮೂತ್ತು, ಅದನಾಲ್**
**ಎಯ್‌ತ್ತೊಳಿನ್ದೇನ್ ಮುನನಾಳ್‌ಗಳೆಲ್ಲಾಮ್,**
**ಇನ್ರು ಕಣ್ಡುಯರ್‌ನ್ದೇನ್**
**ಪೊಯ್‌ತ್ತವಮ್ ಪೋತ್ತುಮ್ ಪುಲೈಚ್ಚಮಯಂಗಳ್**
**ನಿಲತ್ತವಿಯ**
**ಕೈತ್ತಮೆಯ್‌ಜ್ಞಾನತ್ತು, ಇರಾಮಾನುಶನೆನ್ನುಮ್**
**ಕಾರ್‌ದನ್ನೈಯೇ.** 24

ಮೊಯ್‌ತ್ತ–(ಲಂಕೆಯಲ್ಲಿ ರಾಕ್ಷಸ ಸ್ತ್ರೀಯರು ಸೀತಾದೇವಿಯನ್ನು ಮುತ್ತಿಕೊಂಡಿದ್ದಂತೆ) ಈ ಆತ್ಮನನ್ನು ಸುತ್ತುವರಿದಿರುವ, ವೆಮ್ಮ್ ತೀ–ಅತಿ ಕ್ರೂರವಾದ, ವಿನೈಯಾಲ್–ಕರ್ಮಗಳಿಂದ, ಪಲ್–ಅನೇಕವಾದ, ಉಡಲ್‌ತೊರುಮ್–ಒಂದೊಂದು ದೇಹದಲ್ಲಿಯೂ, ಮೂತ್ತು–ಮುದಿತನ ಬರುವವರೆಗೂ ವಾಸವಾಗಿದ್ದು, ಅದನಾಲ್–ಅದರಲ್ಲೇ, ಮುನನಾಳ್‌ಗಳೆಲ್ಲಾಮ್–ಅನಾದಿ ಕಾಲವೆಲ್ಲದರಲ್ಲೂ, ಎಯ್‌ತ್ತುವಳಿನ್ದೇನ್–ನಶಿಸಿದ್ದೇನೆ, ಪೊಯ್–(ರಾವಣ ಸನ್ಯಾಸಿಯಂತೆ) ಅಸತ್ಯವಾದ, ತವಮ್–ತಪಸ್ಸನ್ನು, ಪೋಯ್‌ತ್ತುಮ್–ಕಾಪಾಡಿಕೊಳ್ಳಲು (ಮಾಡಲು), ಪುಲೈಚ್ಚಮಯಂಗಳ್–ನೀಚವಾದ ಮತಗಳನ್ನು, ನಿಲತ್ತು–ಈ ಭೂಲೋಕದಲ್ಲಿ, ಅವಿಯ–ನಾಶವಾಗುವಂತೆ, ಕೈತ್ತ–ನಿರ್ನಾಮ ಮಾಡಿದ, ಮೆಯ್‌ಜ್ಞಾನತ್ತು–ವಾಸ್ತವ ಜ್ಞಾನ ಉಳ್ಳ, ಇರಾಮಾನುಶನ್ ಎನ್ನುಮ್–ರಾಮಾನುಜರು ಈಗ,

ಕಾರ್‌ತನ್ನೈ–ಮೇಘದೋಪಾದಿಯಲ್ಲಿ ಔದಾರ್ಯ ಉಳ್ಳವರಾಗಿ , ಇನ್ರು–ಈಗ , ಕಂಡು–ನನ್ನನ್ನಂಗೀಕರಿಸಲು , ಉಯರ್‌ನ್ದೇನ್–ಉತ್ತಮನಾದೆನು.

ನಾನು ಪೂರ್ವ ಕಾಲದಲ್ಲಿ ಅನೇಕ ಕ್ರೂರ ಕರ್ಮಗಳ ಫಲವಾಗಿ ಅನೇಕ ಜನ್ಮಗಳನ್ನು ಎತ್ತುತ್ತಲೂ , ನಾನಾ ವಿಧವಾದ ದುಃಖಗಳನ್ನು ಅನುಭವಿಸುತ್ತಲೂ ಶ್ರಮ ಪಡುತ್ತಿದ್ದೆನು. ಈಗಲಾದರೋ ರಾವಣ ಸನ್ಯಾಸಿ ಮತ್ತು ಕಾಲನೇಮಿಯ ಜಪಗಳ ರೀತಿ ತಪಸ್ಸನ್ನು ಮಾಡುವ , ಮಾಯಾವಾದಿ , ಚಾರ್ವಾಕ, ಬೌದ್ಧ ಮೊದಲಾದ ಸಕಲ ದುರ್ಮತಗಳನ್ನು (ನಿರ್ನಾಮ ಮಾಡಿ) ನಿವಾರಿಸಿ , ವೇದ ಮಾರ್ಗವನ್ನು ಪ್ರತಿಷ್ಠಾಪಿಸಿ, ಎಲ್ಲೆಡೆ ಮೇಘವು ಮಳೆಸುರಿಸುವಂತೆ ಲೋಕದಲ್ಲಿ ಎಲ್ಲರನ್ನೂ ರಕ್ಷಿಸಿದ, ಸ್ವರೂಪ ಯಾಥಾತ್ಮ್ಯ ಜ್ಞಾನವನ್ನು ಹೊಂದಿರುವ ರಾಮಾನುಜರು , ನನ್ನನ್ನು ಅಂಗೀಕರಿಸಿ ರಕ್ಷಿಸಿದುದರಿಂದ ನಾನು ಉತ್ಕೃಷ್ಟನಾದೆನು.

**ಕಾರೇಯ್ ಕರುಣೈಯಿರಾಮಾನುಶ , ಇಕ್ಕಡಲಿಡತ್ತಿಲ್**
**ಆರೇಯರಿಬವರ್ ನಿನ್ನರುಳಿನ್ರನ್ಮೈ , ಅಲ್ಲಲುಕ್ಕು**
**ನೇರೇಯುರೈವಿಡಮ್‌ನಾನ್ ವನ್ದು ನೀಯೆನ್ನೈಯುಯ್ಯ**
**ತ್ತುಪಿನ್‌ಉನ್**
**ಶೀರೇಯುಯಿರ್ಕುಯಿರಾಯ್,**
**ಅಡಿಯೇರ್ಕಿನ್ರುತಿತ್ತಿಕ್ಕುಮೇ.** 25

ಕಾರ್–ಮೇಘಗಳ ರೀತಿಯಲ್ಲಿ , ಎಯ್–ಸಮತಾಭಾವದಿಂದ , ಕರುಣೈ–ಕೃಪೆಮಾಡಿ ಮಳೆ ಸುರಿಸುವಂತೆ , ಇರಾಮಾನುಶ–ಓ ಯತಿರಾಜಾ ! , ಅಲ್ಲಲುಕ್ಕು–ದುಃಖಕ್ಕೆ , ನೇರೆ–ಪ್ರತ್ಯಕ್ಷವಾಗಿ , ಉರೈವಿಡಮ್–ವಾಸ ಭೂಮಿಯಾಗಿರುವ , ನಾನ್ ಎನ್ನೈ–ನನ್ನನ್ನು , ನೀವಂದು–ತಾವೇ ದಯಮಾಡಿಸಿ , ಉತ್ತಪಿನ್–ಕೃಪೆ ಮಾಡಿದ ಮೇಲೆ , ಉನ್–ತಮ್ಮ ಯಾವ , ಶೀರ್–ಕಲ್ಯಾಣ ಗುಣಗಳೇ , ಉರ್ಕ್ಕು–ನನ್ನ ಆತ್ಮನಿಗೆ , ಉಯಿರಾಯ್–ಧಾರಕವಾಗಿ , ಅಡಿಯೇರ್ಕು–ದಾಸನಾದ ನನಗೆ , ಇನ್ರು–ಈಗ , ತಿತ್ತಿಕ್ಕುಮ್–ಮಧುರವಾಗಿ ಇರುವುದು , ನಿನ್–ತಮ್ಮ , ಅರುಳಿನ್–ಕರುಣೆಯೆಂಬ , ತನ್ಮೈ–ಸ್ವಭಾವವನ್ನು , ಇಕ್ಕಡಲ್–ಸಮುದ್ರ ದೋಪಾದಿಯಲ್ಲಿ ಅಖಂಡವಾಗಿ ಆವರಿಸಿರುವಲ್ಲಿ, ಇಡತ್ತು–ಭೂಲೋಕದಲ್ಲಿ , ಯಾರ್–ಯಾರುತಾನೆ , ಅರಿಪವರ್–ಪೂರ್ಣ ತಿಳಿದುಕೊಳ್ಳಬಲ್ಲರು.

ಚೇತನರ ಪುಣ್ಯ ಪಾಪಗಳೊಂದನ್ನೂ ಪರಿಗಣಿಸದೆ, ಉದಾರ ಸ್ವಭಾವದಿಂದ ಎಲ್ಲೆಡೆಯಲ್ಲೂ ಮಳೆಸುರಿಸುವ ಮೇಘಗಳಂತೆ ಮಾನವರ ಗುಣದೋಷಗಳಲ್ಲಿ ದೃಷ್ಟಿ ಹರಿಸದೆ, ನಿರ್ಹೇತುಕ ಕೃಪಾ ಕಟಾಕ್ಷದಿಂದ ಕೂಡಿರುವ ಓ ಯತಿರಾಜಾ ! ಅತ್ಯಂತ

ದುಃಖಗಳಿಗೆ ತಾಣವಾಗಿದ್ದ ನನ್ನನ್ನು ತಮ್ಮ ಕೃಪಾಕಟಾಕ್ಷದಿಂದ ಅನುಗ್ರಹಿಸಿ ಸಕಲ ದೋಷಗಳನ್ನು ನಿವಾರಿಸಿದ್ದರಿಂದ ಇನ್ನು ತಮ್ಮ ಕಲ್ಯಾಣಗುಣಗಳೇ ನನಗೆ ಧಾರಕ ಪೋಷಕ ಭಾಗ್ಯವಾಗಿವೆ ಎಂದು, ಆಚಾರ್ಯರ ಕೃಪಾತಿಶಯವನ್ನು ಈ ಲೋಕದಲ್ಲಿ ಅಳೆಯಬಲ್ಲವರಾರು ಎಂದು ತಿರುವರಂಗತ್ತ ಮುದನಾರ್ ಅವರು ಹೇಳುತ್ತಾ ಆಶ್ಚರ್ಯಪಡುತ್ತಾರೆ.

**ತಿಕ್ಕುತ್ತಕೀರ್ತಿ ಯಿರಾಮಾನುಶನೈ, ಯೆನ್ ಶೆಯ್ ವಿನೈಯಾಮ್**
**ಮೆಯ್ ಕುತ್ತಮ್ ನೀಕ್ಕ ವಿಳಂಗಿಯ ಮೇಗತ್ತೈ,**
**ಮೇವುಮ್ ನಲ್ಲೋರ್**
**ಎಕ್ಕುತ್ತವಾಳರೆದುಪಿರಪ್ಪೇದಿಯಲ್ವಾಗ ನಿನ್ರೋರ್**
**ಅಕ್ಕುತ್ತಮಪ್ಪಿರಪ್ಪು,**
**ಅವ್ವಿಯಲ್ವೇನಮ್ಮೈಯಾಟ್ಕೊಳ್ಳುಮೇ. 26**

ಎನ್–ನನ್ನಿಂದ, ಶೆಯ್–ಮಾಡಲ್ಪಟ್ಟ, ವಿನೈಯಾಮ್–ಪಾಪಗಳಿಂದ, ಮೆಯ್–ಸ್ಥಿರವಾಗಿ ಉಳಿದಿದ್ದ, ಕುತ್ತಮ್–ದೋಷವನ್ನು, ನೀಕ್ಕ–ತೊಲಗುವಂತೆ ವಿಳಂಗಿಯ–ಪ್ರಕಾಶಮಾನವಾದ, ಮೇಗತ್ತೈ–ಕರುಣೆ ಔದಾರ್ಯಗಳಿಗೆ ಹೆಸರಾದ ಮೇಘದಂತೆ, ತಿಕ್ಕು–ಎಲ್ಲ ದಿಕ್ಕುಗಳಲ್ಲಿಯೂ, ಉತ್ತ–ತುಂಬಿರುವ, ಕೀರ್ತಿ–ಯಶಸ್ಸುಳ್ಳವರಾದ, ಇರಾಮಾನುಶನೈ–ರಾಮಾನುಜರನ್ನು, ಮೇವುಮ್–ಪ್ರಾಪ್ಯವಾಗಿ ಹೊಂದಿರುವಾಗ, ನಲ್ಲೋರ್–ಉತ್ತಮರಾದವರು, ಎಕ್ಕುತ್ತವಾಳರ್–ಎಂತಹ ದೋಷವುಳ್ಳವರಾಗಲೀ, ಎದುಪಿರಪ್ಪು–ಎಂತಹ ಹೀನ ಕುಲದವರಾಗಲೀ, ಏದುಇಯಲ್ವಾಕ–ಯಾವ ನಡವಳಿಕೆಯಲ್ಲಿದ್ದವರಾದರೂ, ನಿನ್ರೋರ್–ಇದ್ದರೋ, ಅಕ್ಕುತ್ತಮ್–ಆ ದೋಷವನ್ನು, ಅಪ್ಪಿರಪ್ಪುಮ್–ಆ ಹೀನ ಜನ್ಮದವರೇ, ಅವ್ವಿಯಮ್ವೇ–ಆ ಕೀಳು ನಡವಳಿಕೆಯೇ, ನಮ್ಮೈ–ನಮಗೆ, ಆಟ್ಕೊಳ್ಳುಮ್–ಸ್ವಾಧೀನಪಡಿಸಿಕೊಳ್ಳುವಂತಾಯಿತು (ಅಂದರೆ ಎಂತಹ ಹೀನಕುಲ, ಕಸುಬುಗಳವರಾದರೂ ಯತಿರಾಜರ ಕೃಪೆಯಿಂದ ಸಮಾಶ್ರಯಣ ಹೊಂದಿ ಉತ್ತಮಜ್ಞಾನವಂತರಾದರು ಎಂದು).

ರಾಮಾನುಜರ ಕೃಪೆಯೇ ನನ್ನಲ್ಲಿ ದೃಢವಾಗಿ ನೆಲೆಮಾಡಿಕೊಂಡಿದ್ದ ಪ್ರಬಲ ಪಾಪಗಳು ನಾಶಹೊಂದಿ ನನ್ನನ್ನು ಸ್ವರೂಪಜ್ಞಾನಿಯನ್ನಾಗಿಸಿತು. ಒಬ್ಬ ಚೇತನನು ಯೋಗ್ಯನಾದನೆಂದು ಸಂತಸಗೊಂಡು, ಈ ವಿಧದಲ್ಲಿಯೇ, ಸಕಲ ಚೇತನರ ದುಃಖಗಳನ್ನು ಕಂಡು, ಮರುಗಿ, ಅವರ ಪಾಪಗಳನ್ನು ನಾಶಮಾಡಿ, ಪರಿಶುದ್ಧರನ್ನಾಗಿಸಿ, ವಾತ್ಸಲ್ಯ, ಸೌಶೀಲ್ಯ, ಸೌಲಭ್ಯಾದಿ ಅನಂತ ಕಲ್ಯಾಣಗುಣಗಳಿಂದ ಲೋಕವೆಲ್ಲಾ ವ್ಯಾಪಿಸಿದ ಮಹಾವೈಭವದಿಂದ ಪ್ರಕಾಶಿಸುತ್ತಿರುವ ಎಂಬೆರುಮನಾರ್ ಅವರನ್ನು

ಆಶ್ರಯಿಸಿರುವ ಮಹಾನುಭಾವರು, ಕುಲ, ಆಚಾರ, ದೋಷಗಳು ಯಾವುದಿದ್ದರೂ, ಎಂತಹ ಕನಿಷ್ಠರಾದರೂ, ಅಂತಹವರ ದೋಷಗಳು, ಕುಲ ಇತ್ಯಾದಿ ಕನಿಷ್ಠ ಅನಿಷ್ಟಗಳನ್ನೆಲ್ಲಾ ನಾಶಗೊಳಿಸಿಕೊಂಡರು. ಎಂತಹ ನೀಚರಾದರೂ ಯತಿರಾಜರನ್ನು ಆಶ್ರಯಿಸಿ ಅವರು ಉದ್ಧಾರಹೊಂದಿ, ಜ್ಞಾನವಂತರಾಗಿರುವರು.

**ಕೊಳ್ಳಕ್ಕುರೈವತ್ತಿಲಂಗಿ, ಕೊಳುನ್ದುವಿಟ್ಟೋಂಗಿಯವುನ್**
**ವಳ್ಳತ್ತನತ್ತಿನಾಲ್ ವಲ್ವಿನೈಯೇನ್ ಮನವ್ ನೀ ಪುಗುನ್ದಾಯ್,**
**ವೆಳ್ಳೈಚ್ಚುಡರ್ ವಿಡುಮುನ್ ಪೆರುಮೇನ್ಮೈಕ್ಕಿಳುಕ್ಕಿದೆನ್ರು**
**ತಳ್ಳುತ್ತಿರಂಗುಮ್, ಇರಾಮಾನುಶವೆನ್ ತನಿನೆಂಗಿಮೇ.** 27

ಇರಾಮಾನುಶ–ರಾಮಾನುಜರೇ, ಕೊಳ್ಳ–ಕೋರಿದವರಿಗೆ ಕೋರಿದುದೆಲ್ಲಾ ನೀಡುವಂತ, ಕುರೈವು–ಒಂದು ಕೊರತೆಯೂ, ಅತ್ತು–ಇಲ್ಲದಿರುವಂತ, ಇಲಂಗಿ–ಪ್ರಕಾಶಿಸುವಂತ, ಕೊಳಂದುವಿಟ್ಟು–ಮೇಲೆ ಮೇಲೆ ಬೆಳೆಯುತ್ತಿರುವ, ಓಂಗಿಯ–ವೃದ್ಧಿಹೊಂದುತ್ತಿರುವ, ಉನ್–ತಮ್ಮ ಯಾವ, ವಳ್ಳಲ್ ತನತ್ತಿನಾಲ್–ಉದಾರ ಉಳ್ಳ ಸ್ವಭಾವದಿಂದ, ವಲ್–ಕ್ರೂರವಾದ, ವಿನೈಯೈ–ಪಾಪಾತ್ಮನಾದ ನನ್ನ, ಮನವ್–ಹೃದಯದಲ್ಲಿ, ನೀ–ನೀವು, ಪುಗುನ್‌ದಾಯ್–ಪ್ರವೇಶ ಮಾಡಿದಿರಿ, ವೆಳ್ಳೈ–ಅತ್ಯಂತ ಪರಿಶುದ್ಧವಾದ, ಶುಡುರ್ ವಿಡುಮ್–ಪ್ರಕಾಶಿಸುತ್ತಿರುವ, ಉನ್–ನಿಮ್ಮ ಯಾವ, ಪೆರು–ಉನ್ನತವಾದ, ಮೇನ್ಮೈಕ್ಕು–ವೈಭವಕ್ಕೆ, ಇದು–ಈ ರೀತಿ ನನ್ನ ಹೃದಯವನ್ನು ಪ್ರವೇಶಿಸಿದುದು, ಇಳುಕ್ಕು ಎನ್ರು–(ನನ್ನ ಮನಸ್ಸಿನ ಕಲ್ಮಶದಿಂದ) ಕಳಂಕ ಬರುವುದೋ ಎಂದು, ತನಿ–ಅವಿಭಾಜ್ಯವಾದ, ಎನ್ನೆಂಜಮ್–ನನ್ನ ಮನಸ್ಸೆಂಬುದು, ತಳ್ಳುತ್ತು–ಶೈಥಿಲ್ಯವನ್ನು ಹೊಂದಿ, ಇರಂಗುಮ್–ಪರಿತಪಿಸುತ್ತಿದೆ.

ಓ ಯತಿಕುಲ ಸಾರ್ವಭೌಮರಾದ ರಾಮಾನುಜರೇ! ಸಕಲ ಚೇತನರ ಮನೋಭೀಷ್ಟಗಳನ್ನು ನೆರವೇರಿಸುತ್ತಿರುವ ತಮ್ಮ ಕಾಯಕವು ವರ್ಧಿಸುತ್ತಿರುವಾಗ್ಯೆ ನಿಮ್ಮ ಔದಾರ್ಯವು, ಈ ಪಾಪಾತ್ಮನಾದ ನನಗೆ ನಿಮ್ಮಲ್ಲಿ ಉಂಟಾದ ಭಕ್ತಿಮಾತ್ರಕ್ಕೇ ಕಟಾಕ್ಷಿಸಿ, ಆ ಯಾವ ವಸಿಷ್ಠ ಮುನಿಗಳು ಚಂಡಾಲನ ಗೃಹವನ್ನು ಪ್ರವೇಶಿಸಿದಂತೆ, ನನ್ನ ಹೃದಯದಲ್ಲಿ ಪ್ರವೇಶಿಸಿರುವಿರಿ. ಇದರಿಂದ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿರುವ ನಿಮ್ಮ ಯಾವ ಪ್ರಭಾವಾತಿಶಯಗಳಿಗೆ, ನನ್ನ ಮನದ ಕಲ್ಮಷವು ತಾಕುವುದರಿಂದ ಅಪಥ್ಯವಾಗುವುದೇನೋ ಎಂದು ನನ್ನ ಮನಸ್ಸು ಅತಿಯಾಗಿ ಪರಿತಪಿಸುತ್ತಿದೆ.

**ನೆಂಗಿಲ್ ಕರ್ಕ್ಕೊಂಡ ಕಂಜನ್ಕಾಯ್ನ್ದನಿಮಲನ್, ನಂಗಳ್**
**ಪಂಗಿತ್ತಿರುವಡಿಪ್ಪಿನ್ನೈತನ್ ಕಾದಲನ್, ಪಾದನ್ನಣ್ಣಾ,**
**ವಂಗಿಕ್ಕರಿಯವಿರಾಮಾನುಶನ್ ಪುಗಳನ್ರಿಯೆನ್ ವಾಯ್**
**ಕೊಂಗಿಪ್ಪರವಗಿಲ್ಲಾದು, ಎನ್ನವಾಳ್ವಿನ್ರುಕೂಡಿಯದೇ. 28**

ನೆಂಗಿಲ್–(ಕಂಸನು ಅಶರೀರ ವಾಣಿಯನ್ನು ಕೇಳಿದ ಮೊದಲ್ಗೊಂಡು ಕ್ರೋಧ ತುಂಬಿಕೊಂಡಿದ್ದ) ಯಾವ ನಂಜಿನ ಹೃದಯದಿಂದ, ಕರ್ಕ್ಕೊಂಡ–ಕ್ರೋಧದಿಂದ ಕಪ್ಪಾಗಿದ್ದ, ಕಂಜನ್ಕೈ–ಕಂಸನನ್ನು, ಕಾಯ್ನ್ದ–ಕೋಪಿಸಿಕೊಂಡು ಕೊಂದ, ನಿಮಲನ್–ಪರಿಶುದ್ಧನೂ, ನಂಗಳ್–ಆಶ್ರಿತರಾದ ನಮಗೆ ಸ್ವಾಮಿಯಾಗಿರುವ, ಪಂಗಿ–ಹತ್ತಿಯಂತೆ ಮೃದುವಾಗಿರುವ, ತಿರುವಡಿ–ಶ್ರೀಪಾದವನ್ನುಳ್ಳ, ಪಿನ್ನೈ–ನೀಳಾದೇವಿ ವಿಷಯದಲ್ಲಿ, ಕಾದಲನ್–ಸ್ನೇಹಭಾವವನ್ನು ಹೊಂದಿದ್ದ ಶ್ರೀಕೃಷ್ಣನ, ಪಾದಮ್–ಪಾದಗಳನ್ನು, ನಣ್ಣಾ–ರಕ್ಷಕವೆಂದು ಆಶ್ರಯಿಸದೆ, ವಂಗಿಕ್ಕು–ವಂಚಿತರಾದ ಅಹಂಕಾರಿ ಮನುಜರಿಗೆ, ಅರಿಯ–ದೊರಕಲಾರದ, ಇರಾಮಾನುಶನ್–ರಾಮಾನುಜರ ಯಾವ, ಪುಗಳ್‌ಅನ್ರಿ–ದಿವ್ಯಗುಣಗಳನ್ನಲ್ಲದೆ, ಎನ್–ನನ್ನ, ವಾಯ್–ಬಾಯಮಾತುಗಳು (ಸ್ತೋತ್ರಗಳು), ಕೊಂಗಿ–ತಪ್ಪಿಯೂ ಕೂಡ, ಅನ್ಯವನ್ನು, ಪರವಗಿಲ್ಲಾದು–ಸ್ತುತಿಸುವುದಿಲ್ಲ, ಇನ್ರು–ಇನ್ನು, ಕೂಡಿಯದು–ನನಗೆ ಇರುವ, ವಾಳ್ವು–ಸುಖ ಸಮೃದ್ಧಿಯು, ಎನ್ನ–ಏನೆಂದು ಹೇಳಲಿ.

ಸರ್ವೇಶ್ವರನು ತನ್ನ ಆಶ್ರಿತ ವಿರೋಧಿಯಾಗಿ ತನ್ನನ್ನು ದ್ವೇಷಿಸಿದ ಕಂಸಾಸುರನನ್ನು ಕೋಪೋದ್ರಿಕ್ತನಾಗಿ ಸಂಹರಿಸಿ, ಆಶ್ರಿತರಲ್ಲಿ ಹೆಚ್ಚಿನ ಪ್ರೇಮಮಯಿಯಾದ ನಪ್ಪಿನ್ನಪಿರಾಟ್ಟಿಯಾದ ಆ ನೀಳಾದೇವಿಯ ಪ್ರಾಣನಾಥನಾದ ಆ ಕೃಷ್ಣಪರಮಾತ್ಮನನ್ನು ಆಶ್ರಯಿಸದೆ, ಅಹಂಕಾರದಿಂದ ಮದಿಸಿರುವ ಮಾನವರಿಗೆ ದುರ್ಲಭವಾಗುವ, ಶ್ರೀ ಭಾಷ್ಯಕಾರರ ಕಲ್ಯಾಣಗುಣಗಳನ್ನು ಬಿಟ್ಟು ಅನ್ಯವಿಷಯಗಳನ್ನು (ಮರೆತೂ ಸಹ) ನನ್ನ ಮಾತೂ ಮನವೂ ಸ್ತೋತ್ರ ಮಾಡಲಾರವು. ಈ ವಿಧವಾಗಿ ನನ್ನ ನಾಲಿಗೆಯಿಂದ ಹೊರಡುವ ಶಬ್ದಗಳ ಭಾಗ್ಯವನ್ನೇನೆನ್ನಲಿ !

**ಕೂಟ್ಟುಮ್ ವಿದಿಯೆನ್ರು ಕೂಡುಂಗೊಲೋ,**
**ತೆನ್ಕುರುಗೈಪ್ಪಿರಾನ್**
**ಪಾಟ್ಟೆನ್ನುಮ್ ವೇದಪ್ಪಶುನ್ದಮಿಳ್ ತನ್ನೈ,**
**ತ್ತನ್ ಪತ್ತಿಯೆನ್ನುಮ್**
**ವೀಟ್ಟಿನ್ ಗಣ್ ವೈತ್ತವಿರಾಮಾನುಶನ್ ಪುಗಳ್**
**ಮೆಯ್ಯುಣರ್ನ್ದೋರ್**
**ಈಟ್ಟಂಗಳ್ ತನ್ನೈ, ಯೆನ್ ನಾಟ್ಟಂಗಳ್**
**ಕಂಡಿನ್ಪಮೆಯ್ ದಿಡವೇ. 29**

ತೆನ್–ನೋಡಲು ಅಂದವಾದ, ಕುರುಗೈ–ಕುರಿಕಾಪುರಿ ಎಂಬ ಆಳ್ವಾರ್ ತಿರುನಗರಿಗೆ, ಪಿರಾನ್–ನಾಥರಾದ ನಮ್ಮಾಳ್ವಾರರ, ಪಾಟ್ಟು ಎನ್ನುಮ್–ಪಾಶುರಗಳು ಎಂಬ ಹಾಡುಗಳು, ವೇದಮ್–ವೇದರೂಪವಾದವುಗಳು, ಪಶುಮ್–ಸುಂದರ ಪದಗಳ ಜೋಡಣೆಯಿಂದಾದ, ತಮಿಳ್ ತನ್ನೈ–ದ್ರಾವಿಡ ಭಾಷೆಯಲ್ಲಿನ ತಿರುವಾಯ್ಮೊಳಿ ಮತ್ತಿತರ ಪ್ರಬಂಧಗಳಲ್ಲಿ, ತನ್–ತಮ್ಮ, ಯಾವ, ಪತ್ತಿಯೆನ್ನುಮ್–ಭಕ್ತಿತುಂಬಿ, ವೀಟ್ಟಿನ್‌ಗಣ್–ವಾಸಸ್ಥಾನದಲ್ಲಿ, ವೈತ್ತ–ಇಟ್ಟುಕೊಂಡಿರುವ, ಇರಾಮಾನುಶನ್–ಉಡೈಯವರ ಯಾವ, ಪುಗಳ್–ಕಲ್ಯಾಣ ಗುಣಗಳನ್ನು, ಮೆಯ್–ತತ್ತ್ವವಾಗಿ, ಉಣರ್‌ನ್ದೋರ್–ಒಪ್ಪಿಕೊಂಡಿರುವವರ, ಈಟ್ಟಂಗಳ್‌ತನ್ನೈ–ಸಮೂಹವನ್ನು, ಎನ್ನಾಟ್ಟಂಗಳ್–ನನ್ನ ಕಣ್ಣುಗಳು, ಕಂಡು–ನೋಡಿ, ಇನ್ಬಮ್–ಸುಖವನ್ನು, ಎಯ್‌ದಿಡ–ಹೊಂದುವಂತೆ, ಕೂಟ್ಟುಮ್–ಸೇರಿಸುವುದಕ್ಕೆ, ವಿದಿ–ಅವರ ಕೃಪೆ, ಎನ್ರು–ಯಾವಾಗ, ಕೂಡಂಗೊಲ್–ಒದಗುವುದೋ.

ಅತ್ಯಂತ ರಮ್ಯವಾದ ತಿರುನಗರಿಯ ನಿರ್ವಾಹಕರಾದ ಶಠಕೋಪರು ತಮ್ಮ ತಿರುವಾಯ್ಮೊಳಿಯೇ ಮೊದಲಾದ ದಿವ್ಯ ಪ್ರಬಂಧಗಳ ಮೂಲಕ ಸರ್ವರಿಗೂ ಸ್ವರೂಪಜ್ಞಾನವು ದೊರೆತು ಉಜ್ಜೀವಿಸುವಂತೆ ಮಾಡಿರುವರು. ನಮ್ಮಾಳ್ವಾರರ ಈ ಯಾವ ದಿವ್ಯ ಸೂಕ್ತಿಮಯವಾಗಿರುವ, ಸರ್ವಾಧಿಕಾರವಾಗಿರುವ ದ್ರಾವಿಡ ವೇದಗಳೆಂಬ ದಿವ್ಯಪ್ರಬಂಧಗಳನ್ನು ತಮ್ಮ ಭಕ್ತಿರೂಪವಾಗಿ ದೇವಾಲಯಗಳಲ್ಲಿ ಪ್ರತಿಷ್ಠಾಪಿಸಿರುವ ಯಾವ ರಾಮಾನುಜರ ಕಲ್ಯಾಣಗುಣಗಳನ್ನು ಅರಿತ ಜ್ಞಾನಿಗಳ ಸಮೂಹಗಳನ್ನು ಸದಾಕಾಲ ಕದಲದೆ ಸೇವಿಸಿ ಆನಂದಪಡುವ ಭಾಗ್ಯವಿಶೇಷವು ನನ್ನದಾಗಿರುವುದು.

ಶ್ರೀಭಾಷ್ಯಕಾರರು ದಾಸನನ್ನು ಶೇಷಭೂತನನ್ನಾಗಿ ಅಂಗೀಕರಿಸಿದರು. ಇನ್ನು ಆನಂದಾತೀತವಾದ ಪರಮಪದ ಲಭಿಸಿದರೂ, ಅತ್ಯಂತ ದುಃಖವೇ ಒದಗಿದರೂ, ತನಗೆ ಈ ಎರಡೂ ಸಮಾನವೇ ಎಂದು ತಮ್ಮ ಸ್ಥಿತಪ್ರಜ್ಞಭಾವದ ಅಧ್ಯವಸಾಯವನ್ನು ತಿರುವ ರಂಗತ್ತ ಮುದನಾರ್ ಅವರು ತಿಳಿಸುತ್ತಿರುವರು ಈ ಪಾಶುರದಲ್ಲಿ :

**ಇನ್ಬನ್ತರು ಪೆರುವೀಡುವನ್ದೆಯ್‌ದಿಲೆನ್, ಎಣ್ಣಿರನ್ದ**
**ತನ್ಬನ್ತರುನಿರಯಮ್ ಪಲಶೂಳಿಲೆ, ತೊಲ್ಲುಲಗಿಲ್**
**ಮನ್ಪಲ್ಲುಯಿರ್ ಗಟ್ಕಿರೈಯವನ್ ಮಾಯನೆನಮೊಳಿನ್ದ**
**ವನ್ಬನನಗನ್, ಇರಾಮಾನುಶನೆನ್ನೈಯಾಂಡನನೇ.** 30

ತೊಲ್–ಅನಾದಿಯಾಗಿರುವ, ಉಗಿಲಿಲ್–ಲೋಕದಲ್ಲಿ, ಮನ್–ನಿತ್ಯರಾಗಿ, ಪಲ್–ಅನೇಕರಾದ, ಉಯಿರ್‌ಗಟ್ಕು–ಆತ್ಮರಿಗೆ, ಇರೈಯವನ್–ನಾಥನಾಗಿರುವ,

ಮಾಯರ್ಎನ–ಸ್ವರೂಪಗುಣಗಳಿಂದ ಆಶ್ಚರ್ಯಭೂತನಾದ ಸರ್ವೇಶ್ವರನೆಂದು, ಮೊಳಿಂದ–ಶ್ರೀಭಾಷ್ಯದ ಮೂಲಕ ಪ್ರತಿಪಾದಿಸಿದ, ಅನ್ಬನ್–ಸ್ನೇಹಯುಕ್ತರಾಗಿ, ಅನಗನ್–ಪಾಪಸಂಬಂಧಾತೀತರಾಗಿ ಇರುವ ಯಾವ, ಇರಾಮಾನುಶನ್–ಎಂಬೆರು ಮಾನಾರರು, ಎನ್ನೈ–ನನ್ನನ್ನು, ಆಣ್ಣನನ್–ದಾಸನನ್ನಾಗಿಸಿಕೊಂಡರು, ಇನ್ಬವನ್ ತರು–ಇನ್ನು ಮೇಲೆ, ಪೆರುವೀಡು–ಪರಮ ಪುರುಷಾರ್ಥವಾದ ಮೋಕ್ಷವು, ವನ್ದು–ಬಂದು, ಎಯ್ದಿಲೇನ್–ಲಭಿಸಿದರೂ, ಎಣ್ಇರನ್ದ–ಎಣೆಯಿಲ್ಲದ, ತುನ್ಬವನ್ ತರು–ದುಃಖವನ್ನೀವ, ಪಲನಿರಯಮ್–ಅನೇಕ ನರಕ ಬಾಧೆಗಳು, ಶೂಳಿಲ್ಎನ್–ತಪ್ಪಿಸಿಕೊಂಡುಹೋಗುವಂತೆ ಬಳಸಿಕೊಳ್ಳುತ್ತೇನೆಯೇ.

ಜೀವಾತ್ಮರಿಗೆ ಸಹಜವಾದ ಜನನ ಮರಣಾದಿ ಯಾವ ದೋಷಗಳು ಇಲ್ಲ ವಾದರೂ, ಅನಾದಿಕಾಲದ ಕರ್ಮಸಂಬಂಧದಿಂದ ದೇವ, ಮನುಷ್ಯಾದಿ ಜಾತಿಗಳಲ್ಲಿ ಜನಿಸಿ ಬದ್ಧ ಸಂಸಾರಿಗಳಾಗಿರುವ ಬ್ರಹ್ಮರುದ್ರಾದಿ ಸಮಸ್ತ ಜೀವರಾಶಿಗೂ, ಶ್ರೀಮನ್ನಾರಾಯಣನೇ ಸ್ವಾಮಿ ಎಂಬ ತತ್ವವುಳ್ಳ ವೇದಾಂತಾರ್ಥವನ್ನು, ಈ ಚೇತನರು ಅನ್ಯಾಯವಾಗಿ ನಶಿಸದೆ ಉದ್ಧಾರ ಹೊಂದಲು, ಕರುಣಾಸಾಗರರಾಗಿ ತಮ್ಮ ಶ್ರೀ ಭಾಷ್ಯದಲ್ಲಿ ವಿಶದೀಕರಿಸಿರುವ ಯಾವ ಮಹಾತ್ಮ ಶ್ರೀ ಭಾಷ್ಯಕಾರರು ನನ್ನನ್ನು ಶಿಕ್ಷಿಸಿ, ರಕ್ಷಿಸಿ, ತಮ್ಮ ಶಿಷ್ಯವರ್ಗದಲ್ಲಿ ಸೇರಿಸಿಕೊಂಡರು. ಈ ಉತ್ತಮ ಪುರುಷಾರ್ಥ ಲಭಿಸಿದ ನನಗೆ ಬಂಧಮೋಕ್ಷಗಳೆಲ್ಲವೂ ಸಮಾನವೇ, ಅಂತೆಯೇ ಯತಿರಾಜರ ವಿಷಯದಲ್ಲಿ ದೃಢವಾದ ಪ್ರಾವಣ್ಯ ಪಡೆದಿರುವವರಿಗೆ, ಅವರ ಕೃಪೆ ಯಿಂದ ಸುಖ ದುಃಖಗಳು ಸಮಾನವೆನಿಸುವುವು.

**ಆಂಡುಗಳ್ ನಾಳ್ ತಿಂಗಳಾಯ್,**
**ನಿಗಳ್ಕಾಲಮೆಲ್ಲಾಮ್ ಮನಮೇ**
**ಯೀಂಡುಪಲ್ಯೋನಿಗಳ್ ತೋರುಳಲ್ವೋಮ್,**
**ಇನ್ರೋರೆಣ್ಣಿನ್ರಿಯೇ**
**ಕಾಂಡಗು ತೋಳಣ್ಣಲ್ ತೆನ್ನತ್ತಿಯೂರರ್ ಕಳಲಿಣೈಕ್ಕೀಳ್**
**ಪೂಂಡವನ್ಬಾಳನ್, ಇರಾಮಾನುಶನ್ನೈಪ್ಪೊರುನ್ದಿನಮೇ.** 31

ಮನಮೇ–ಓ ಮನಸ್ಸೇ !, ನಾಳಾಯ್–ದಿನಗಳು, ತಿಂಗಳಾಯ್–ತಿಂಗಳು ಗಳು, ಆಂಡುಗಳಾಯ್–ಸಂವತ್ಸರಗಳು ಆಗಿ, ನಿಗಳ್–ನಡೆಯುತ್ತಿರುವ, ಕಾಲ ಮೆಲ್ಲಾಮ್–ಕಾಲವೆಲ್ಲವೂ, ಈಂಡು–ಸೇರಿ, ಪಲ್–ಅನೇಕವಾದ, ಯೋನಿಗಳ್ ದೋರುವು–ಅನೇಕ ಯೋನಿಗಳಿಂದ ದೇವ, ಮನುಷ್ಯ, ಪಶು ಪಕ್ಷ್ಯಾದಿ ಜಾತಿಗಳಲ್ಲಿ, ಉಳಲ್ವೋಮ್–ಅವತರಿಸುತ್ತಲೂ, ಸಾಯುತ್ತಲೂ ಇರುವ ನಮಗೆ, ಇನ್ರು–ಈಗ,

ಒರ್—ಒಂದು, ಎಣ್ ಇನ್ರಿಯೋ—ಎಣೆಯಿಲ್ಲದ, ಕಾಣ್—ಸೇವೆ ಮಾಡಲು, ತಗು—ಯೋಗ್ಯವಾದ, ತೋಳ್—ಭುಜಬಲವುಳ್ಳ ಮತ್ತು ರೂಪಗುಣ ಔದಾರ್ಯಗಳಿಂದ ತುಂಬಿದ, ಅಣ್ಣಲ್—ಸ್ವಾಮಿಯಾದ, ತೆನ್—ರಮ್ಯವಾದ, ಅತ್ತಿಯೂರರ್—ಹಸ್ತಿಗಿರಿ ಯೆಂದು ಪ್ರಸಿದ್ಧವಾದ ಕಾಂಚಿಪುರದಲ್ಲಿ ನಿತ್ಯವಾಸಮಾಡುತ್ತಿರುವ ವರದರಾಜ ಸ್ವಾಮಿಯ ಯಾವ, ಇಟ್ಟೈ—ಎಲ್ಲವನ್ನೂ ಪಡೆದಿರುವ, ಕಳಲ್‌ಕೀಳ್—ಶ್ರೀಪಾದಗಳಡಿ ಯಲ್ಲಿ, ಪೂಂಡ—ದಾಸನಾದ, ಅನ್ಬಾಳನ್—ಪ್ರೇಮವುಳ್ಳ, ಇರಾಮಾನುಶನ್ಐ—ರಾಮಾನುಜರನ್ನು, ಪೊರುಂದಿನಂ—ಸಂತೋಷದಿಂದ ಹೊಂದಿರುವಂತೆ ಲಭ್ಯವಾಗಿದೆ.

ದಿನ, ಪಕ್ಷ, ಮಾಸ, ಸಂವತ್ಸರಗಳು ಲೆಕ್ಕವಿಲ್ಲದೆ ಕಳೆದು ಅನೇಕ ಯೋನಿ ಗಳಲ್ಲಿ ಹುಟ್ಟಿ ಪುನರಪಿ ಮರಣಂ, ಪುನರಪಿ ಜನನಂ ಎಂಬಂತೆ, ಜೀವನ್ಮರಣ ಚಕ್ರದಲ್ಲಿ ಸಿಕ್ಕಿರುವಾಗ, ದಿವ್ಯಾಯುಧ ಭುಜಬಲ ಪರಾಕ್ರಮಿಯೂ, ಸುಂದರನೂ, ಪರಮೋ ದಾರಿಯೂ, ಕಾಂಚೀಪುರಾಧೀಶನೂ ಆದ ವರದರಾಜ ಸ್ವಾಮಿಯ ಪಾದಾರವಿಂದ ಗಳಲ್ಲಿ ಅತ್ಯಂತ ಪ್ರಾವಣ್ಯವುಳ್ಳ ಯತಿರಾಜರ ಶ್ರೀಪಾದಗಳನ್ನು ಸದಾಕಾಲವೂ ಕಂಡು ಆಶ್ರಯ ಪಡೆದು ಕೃತಾರ್ಥನಾದೆನು ಎನ್ನುತ್ತಾರೆ ತಿರುವರಂಗತ್ತ ಮುದನಾರ್ ಅವರು.

**ಪೊರುನ್ದಿಯ ತೇಶುಮ್ ಪೊರೈಯುಮ್ ತಿರಲುಮ್**
**ಪುಗಳುಮ್, ನಲ್ಲ**
**ತಿರುನ್ದಿಯ ಞಾನಮುಮ್ ಶೆಲ್ವಮುಮ್ ಶೇರುಮ್,**
**ಶೆರುಗಲಿಯಾಲ್**
**ವರುನ್ದಿಯ ಞಾಲತ್ತೈ ವಣ್ಮೈಯಿನಾಲ್ ವನ್ದೆಡುತ್ತಳಿತ್ತ**
**ಅರುನ್ದವನ್, ಎಂಗಳಿರಾಮಾನುಶನ್ನೈಯಡೈಪವರ್ಕ್ಕೇ.** 32

ಶೆರು—ನಶಿಸುವಂತೆ ಮಾಡಿದ, ಕಲಿಯಾಲ್—ಕಲಿ ಪ್ರಭಾವದ ದೋಷದಿಂದ, ವರುನ್ದಿಯ—ದುಃಖಪಡುತ್ತಿರುವ, ಞಾಲತ್ತೈ—ಭೂಮಿಯನ್ನು, ವಣ್ಮೈಯಿನಾಲ್—ತಮ್ಮ ಔದಾರ್ಯದಿಂದ, ವನ್ದು—ಬಂದು, ಎಡುತ್ತು—(ಮುಳುಗಿದ್ದವರನ್ನು) ಮೇಲಕ್ಕೆ ಎತ್ತಿ, ಅಳಿತ್ತ—ಕಾಪಾಡಿದವರೂ, ಅರುಮ್—(ಪ್ರಸನ್ನ ಜನಕೂಟಸ್ಥರಾಗಲು ಯಾವ ತಪಸ್ಸಿನಿಂದಲೂ) ಸಾಧ್ಯವಾಗದ, ತವನ್—ಶರಣಾಗತಿ ರೂಪದ ತಪಸ್ಸನ್ನು ಮಾಡಿ ದವರಾದ, ಎಂಗಳ್ ಇರಾಮಾನುಶನ್ನೈ—ನಮ್ಮ ಶ್ರೀಮದ್ರಾಮಾನುಜರನ್ನು, ಅಡೈಪವರ್ಕ್ಕು—ಆಶ್ರಯಿಸಿದವರಿಗೆ, ಪೊರುನ್ದಿಯ—(ಸ್ವರೂಪಕ್ಕೆ ತಕ್ಕಂತೆ) ಹೊಂದಿದ್ದ, ತೇಶುಮ್—ತೇಜಸ್ಸನ್ನು, ಪೊರೈಯುಮ್—ಶ್ರೀವೈಷ್ಣವ ತೇಜಸ್ಸನ್ನೂ, ತಿರಲುಮ್—(ಶಮದಮಾದಿಗಳನ್ನು) ಇಂದ್ರಿಯಗಳನ್ನು ಜಯಿಸುವ ಶಕ್ತಿಯನ್ನೂ, ಪುಗಳುಮ್—

ದಿವ್ಯಗುಣ ಪ್ರಸಿದ್ಧಿಯನ್ನೂ, ನಲ್ಲ–ಉತ್ಕೃಷ್ಟವಾದ, ತಿರುನ್ದಿಯು–ಪಡೆದುಕೊಂಡಿರುವ ಜ್ಞಾನವುಮ್–ಜ್ಞಾನವನ್ನು, ಶೆಲ್ವಮುಮ್–ಭಕ್ತಿರೂಪವಾದ ಸಂಪತ್ತನ್ನು, ಶೇರುಮ್–ತಾನೇ ಬಂದು ಸೇರುತ್ತದೆ.

ಪಾಪಭೂಯಿಷ್ಟವಾದ ಈ ಕಲಿಯುಗದಲ್ಲಿ ಸಕಲ ಚೇತನರೂ, ಕಾಮ ಕ್ರೋಧ ಲೋಭಾದಿ ದೋಷಗಳಿಂದ ತುಂಬಿ ನಶಿಸುತ್ತಿರುವಾಗ, ತಮ್ಮ ನಿರ್ಹೇತುಕ ಕೃಪೆಯಿಂದ ಕಲಿದೋಷವನ್ನು ತೊಲಗಿಸಿ, ಸಕಲ ಜೀವರನ್ನೂ ಉದ್ಧಾರ ಮಾಡ ಲೋಸುಗ, ಈ ಲೋಕದಲ್ಲಿ ಅವತರಿಸಿ, ಶ್ರಿಯಃ ಪತಿಯ ಸನ್ನಿಧಿಯಲ್ಲಿ, ಈ ಚೇತನರ ನಿಮಿತ್ತವಾಗಿ ಸರ್ವೋತ್ತಮವಾದ, ಶರಣಾಗತಿ ಎಂಬ ಮಹಾತಪಸ್ಸನ್ನು ಆಚರಿಸಿದ, ನಮ್ಮ ಯತಿರಾಜಸ್ವಾಮಿ (ರಾಮಾನುಜರು) ಯವರನ್ನು ಆಶ್ರಯಿಸಿದ ವರು, ಆಶ್ರಯಿಸುವ ಮೊದಲು ಎಂತಹ ನೀಚರಾಗಿರಲಿ, ಅವರು ಈ ಮಹಾ ಪ್ರಭುವಿನ ಪ್ರಭಾವದಿಂದ, ಅವರ ಸರ್ವದೋಷಗಳೂ ನಶಿಸಿ, ಶ್ರೀವೈಷ್ಣವ ತೇಜಸ್ಸನ್ನು ಹೊಂದುವರಲ್ಲದೆ, ಅವರಿಗೆ ಇಂದ್ರಿಯ ನಿಗ್ರಹವೂ, ಉನ್ನತ ಕೀರ್ತಿಯೂ, ಸ್ವರೂಪ ಜ್ಞಾನವೂ ಲಭಿಸುವುದಲ್ಲದೆ, ಭಕ್ತಿರೂಪವೆಂಬ ಸಂಪತ್ತನ್ನೂ, ಆತ್ಮಗುಣಗಳನ್ನೂ, ಅವರು ಬಯಸದೆ ತಂತಾವೇ ಪಡೆದುಕೊಳ್ಳುತ್ತಾರೆ ಎಂದು ರಾಮಾನುಜರ ಕಲ್ಯಾಣಗುಣಗಳನ್ನು ತಿಳಿಸುತ್ತಾರೆ ತಿರುವರಂಗತ್ತ ಮುದನಾರ್ ಅವರು.

**ಅಡೈಯಾರ್ ಕಮಲತ್ತಲರ್ಮಗಳ್ ಕೇಳ್ವನ್,**
**ಕೈಯಾಳಿಯೆನ್ನುಮ್**
**ಪಡೈಯೊಡು ನಾನ್ದಗಮುಮ್ ಪಡರ್ ದಂಡುಮ್,**
**ಒಣ್ ಶಾರ್ಙ್ಗವಿಲ್ಲುಮ್**
**ಪುಡೈಯಾರ್ ಪುರಿಶಂಗಮುಮಿನ್ದಪ್ಪೂದಲಂಗಾಪ್ಪದರ್ಕೆನ್ರು**
**ಇಡೈಯೇ, ಯಿರಾಮಾನುಶಮುನಿಯಾಯಿನ ವಿನ್ನಿಲತ್ತೇ.** 33

ಅಡೈ–ಹಸಿವಿನಿಂದ, ಅರ್–ತುಂಬಿರುವ (ಈ ಭೂಲೋಕದಲ್ಲಿ), ಕಮಲತ್ತು ಅಲರ್ ಮಗಳ್–ಕಮಲಪುಷ್ಪದ ಮಗಳಾದ ಮಹಾಲಕ್ಷ್ಮಿಗೆ, ಕೇಳ್ವನ್–ನಾಥನಾದ ಸರ್ವೇಶ್ವರನ, ಕೈ–ಶ್ರೀಹಸ್ತದಲ್ಲಿರುವ, ಆಳಿಯೆನ್ನುಮ್–ಸುದರ್ಶನವೆಂದು ಪ್ರಸಿದ್ಧಿ ಹೊಂದಿರುವ, ಪಡೆಯೊಡು–ಆಯುಧವು, ನಾನ್ದಗಮುಮ್–ನಂದಕವೆಂಬ ಕತ್ತಿಯೂ, ಪಡರ್–ಆಶ್ರಿತ ರಕ್ಷಣದಲ್ಲಿ ನಿರತವಾದ, ತಂಡುಮ್–ಗದೆಯೂ, ಒಣ್–ವಿಲಕ್ಷಣ ವಾದ, ಶಾರ್ಙ್ಗವಿಲ್ಲುಮ್–ಶಾರ್ಙ್ಗವೆಂಬ ಬಿಲ್ಲೂ, ಪುಡೈಆರ್–ಹಿಡಿದಿರುವ ಯಾರ, ಪುರಿ–ಜ್ವಾಲೆ ಕಾರುವ, ಶಂಗಮ್–ಪಾಂಚಜನ್ಯವೂ, ಇನ್ದಪೂದಲಮ್–

ಈ ಭೂಲೋಕವನ್ನು, ಕಾಪ್ಪದರ್ಕು-ಎನ್ರು-ರಕ್ಷಿಸುವುದಕ್ಕಾಗಿ ಎಂದು (ಇರುವುದಷ್ಟೆ), ಇನ್ನಿಲತ್ತೈ-ಈ ಭೂಲೋಕದಲ್ಲಿ, ಯಿರಾಮಾನುಶಮುನಿ-ಯಾವ ಯತಿರಾಜರಲ್ಲಿ, ಇಡ್ಡೈಯೇ-ಈ ಪಂಚಾಯುಧಗಳೆಲ್ಲಾ, ಆಯಿನ-ಸೇರಿರುವುವು.

ಅಲರ್ ಮಗಳಾದ ಶ್ರೀ ಮಹಾಲಕ್ಷ್ಮಿಯ ಪತಿಯಾದ ಸರ್ವೇಶ್ವರನ ಶ್ರೀಹಸ್ತಗಳಲ್ಲಿರುವ, ಮನಸ್ತತ್ವಾಭಿಮಾನ ದೇವತೆಯಾದ ಗಂಭೀರ ಸ್ವಭಾವವುಳ್ಳ ಸುದರ್ಶನ ಚಕ್ರವೂ, ತಾಮಸಾಹಂಕಾರಾದಿಗಳ ಅಭಿಮಾನ ದೇವತೆಯಾದ ಪಾಂಚಜನ್ಯವೂ, ಬುದ್ಧಿಗೆ ಅಭಿಮಾನ ದೇವತೆಯಾದ ಮತ್ತು ಆಶ್ರಿತ ರಕ್ಷಕವಾದ ಕೌಮೋದಕಿ ಎಂಬ ಗದೆಯೂ, ಜ್ಞಾನಾಭಿಮಾನ ದೇವತೆಯಾದ ನಂದಕವೆಂಬ ಕತ್ತಿಯೂ, ಇಂದ್ರಿಯಗಳಿಗೆ ಕಾರಣವಾದ ಸಾತ್ವಿಕಾಹಂಕಾರಗಳಿಗೆ ಅಭಿಮಾನ ದೇವತೆಯಾದ ಶಾರ್ಙ್ಗವೆಂಬ ಬಿಲ್ಲೂ ಸೇರಿದ ಪಂಚಾಯುಧಗಳು ಈ ಭೂಲೋಕವನ್ನು ಕುರಿತು ಸದಾ ಚಿಂತಿಸುತ್ತಿರುತ್ತವೆ. ಈ ಭೂಮಿಯಲ್ಲಿ ಚೇತನರನ್ನು ಉದ್ಧಾರ ಮಾಡಲೋಸುಗ ಅವತರಿಸಿರುವ ಶ್ರೀಮದ್ರಾಮಾನುಜರೇ ಈ ಪಂಚಾಯುಧಗಳೂ ಸೇರಿದ ಅಪರಾವತಾರವಾಗಿ ಸದ್ಗುಣಗಳನ್ನು ಅಭಿವೃದ್ಧಿ ಪಡಿಸುತ್ತಿರುವರು, ಎಂದು ತಿರುವರಂಗತ್ತ ಮುದನಾರ್ ಅವರು ರಾಮಾನುಜರ ಬಗ್ಗೆ ಹೇಳಿರುತ್ತಾರೆ.

**ನಿಲತ್ತೈಚ್ಚೆರುತ್ತುಣ್ಣುಮ್ ನೀಶಕ್ಕಲಿಯೈ, ನಿನೈಪ್ಪರಿಯ**
**ಪಲತ್ತೈಚ್ಚೆರುತ್ತುಮ್ ಪಿರಂಗಿಯದಿಲ್ಲೈ, ಯೆನ್ ಪೆಯ್ ವಿನೈತೆ**
**ನ್ಪುಲತ್ತಿಲ್ ಪೊರಿತವಪ್ಪುತ್ತಗಚ್ಚುಮ್ಮೈಪೊರಿಕ್ಕಿಯಪಿನ್**
**ನಲತ್ತೈಪ್ಪೊರುತ್ತದು, ಇರಾಮಾನುಶನ್ರನ್ ನಯಪ್ಪುಗಳೇ.** 34

ಇರಾಮಾನುಶನ್ ತನ್-ರಾಮಾನುಜರ, ನಯಮ್-ಬಯಸಿದ, ಪುಗಳ್-ಗುಣಗಳ ಸಮೂಹವು, ನಿಲತ್ತೈ-ಭೂಲೋಕದಲ್ಲಿ, ಶೆರುತ್ತು-ಶ್ರಮವಹಿಸಿ, ಉಣ್ಣುಮ್-ಹಿಂಸಿಸುತ್ತಿರುವ, ನೀಶಮ್-ನೀಚನಾದ, ಕಲಿಯೈ-ಕಲಿಯುಗದ ಕಲಿಪುರುಷನ, ನಿನೈಪ್ಪು ಅರಿಯ-ಸ್ಮರಿಸಲು ಅಶಕ್ಯವಾದ, ಪಲತ್ತೈ-ಬಲವನ್ನು, ಶೆರುತ್ತುಮ್-ಸಹಿಸುವಂತೆ ಮಾಡಿದರೂ, ಪಿರಂಗಿಯದು ಇಲ್ಲೈ-ಪ್ರಕಾಶಿಸಲಿಲ್ಲ; ಎನ್-ನನ್ನ ಕೈಯಲ್ಲಿ, ಪೆಯ್-ಮಾಡಲ್ಪಟ್ಟಿರುವ, ವಿನೈ-ಪಾಪಗಳನ್ನು, ತೆನ್ ಪುಲತ್ತಿಲ್-ಯಮನ ಪಟ್ಟಣದಲ್ಲಿ, ಪೊರಿತ್ತ-ಬರೆದಿಟ್ಟಿರುವ, ಅಪ್ಪುತ್ತಕಮ್-ಆ ಪುಸ್ತಕಗಳ, ಶುಮೈ-ಭಾರವನ್ನು, ಪೊರುಕ್ಕಿಯಪಿನ್-ದಹಿಸಿದ ಮೇಲೆ, ನಲತ್ತೈ-ವಿಲಕ್ಷಣ ಪ್ರಕಾಶ ಪ್ರಭಾವವನ್ನು, ಪೊರುತ್ತರು-ಧರಿಸಲ್ಪಟ್ಟಿತು.

ಈ ಲೋಕದಲ್ಲಿ, ಕಲಿದೇವತೆಯಾದ ಶನಿಯು, ಸಕಲ ಪ್ರಾಣಿಗಳನ್ನೂ ಪ್ರವೇಶಿಸಿ ಸತ್ಕರ್ಮಗಳಲ್ಲಿ ಆಸಕ್ತರಾಗದಂತೆ ಮಾಡಿರುವಾಗ, ರಾಮಾನುಜರ ಅವತಾರ

ವಾಗಿ, ಅವರ ನಿರ್ಹೇತುಕ ಕೃಪೆಯಿಂದ, ಅತಿ ಬಲಿಷ್ಠವಾದ ಕಲಿದೋಷವನ್ನು ನಾಶ ಮಾಡಿದರೂ ಅವರ ಮಹಿಮೆ ಪ್ರಕಾಶವಾಗಲಿಲ್ಲ. ನಾನು ಹಿಂದೆ ಮಾಡಿದ ಅನಂತ ಪಾಪಗಳಿಗೆ ದಂಡನೆ ಮಾಡಲು ಬರೆದಿಟ್ಟಿರುವ ಯಮಲೋಕದ ಚಿತ್ರಗುಪ್ತರು ಪುಸ್ತಕವನ್ನು ನೋಡಿ, "ಈತನು ಯತಿರಾಜರ ಪಾತ್ರನಾದವನಾಗಿರುವುದರಿಂದ ದಂಡನಾರ್ಹನಲ್ಲ" ಎಂದು ಯತಿರಾಜರ ಶ್ರೀಪಾದ ಸಂಬಂಧ ಹೊಂದಿರುವ ವಿಲಕ್ಷಣ ವಿಷಯವನ್ನು ಅರಿತು, ಆ ಪುಸ್ತಕವು ಯಾವ ಪ್ರಯೋಜನವಿಲ್ಲ ಎಂದು ಸುಟ್ಟು ಬಿಡುತ್ತಾರೆ. ಇಂತಹ ಅನಾದಿ ಕಾಲಾರ್ಜಿತ ಪಾಪ ಸಂಚಯ ಉಳ್ಳ ಯಾವ ನನ್ನ ಪಾಪದ ಮೂಟೆಯನ್ನು ಭಸ್ಮಮಾಡಿದ ಯತಿರಾಜರ ಕೀರ್ತಿಯು ಪ್ರಕಾಶಿಸಿ ಅಜರಾಮರವಾಯಿತು ಎನ್ನುತ್ತಾರೆ.

**ನಯವೇನೊರುದೆಯ್ವಮ್ ನಾನಿಲತ್ತೇ, ಶಿಲಮಾನಿಡತ್ತೈ**
**ಪ್ಪುಯಲೇಯೆನಕ್ಕವಿಪ್ಪೋತ್ತಿಶೆಯ್ಯೇನ್, ಪೊನ್ನರಂಗಮೆನ್ನಿಲ್**
**ಮಯಲೇಪೆರುಗುಮಿರಾಮಾನುಶನ್ ಮನ್ನುಮಾಮಲರ್ತಾಳ್**
**ಅಯರೇ, ನರುವಿನೈಯೆನ್ನೈಯೆವ್ವಾರಿನ್ರಡರ್ಪ್ಪದುವೇ.** 35

ಒರುದೆಯ್ವಮ್–ಬೇರೊಬ್ಬ ದೇವತೆಯನ್ನು, ನಯವೇನ್–ಅಪೇಕ್ಷಿಸು ವುದಿಲ್ಲ, ನಾನಿಲತ್ತೆ–ಈ ಭೂಲೋಕದಲ್ಲಿ, ಶಿಲಮಾನಿಡತ್ತೈ–ಕೆಲವು ನೀಚರನ್ನು, ಪುಯಲೇಎನ–ಉದಾರಿಯೆಂದು, ಕವಿ–ವರ್ಣಿಸಿ, ಪೋತ್ತಿಶೈಯೇನ್–ಸ್ತೋತ್ರ ಮಾಡೆನು, ಪೊನ್–ಅಂದವಾದ, ಅರಂಗಮ್ ಎನ್ನಿಲ್–ಶ್ರೀರಂಗ ಎಂದೊಡನೆ, ಮಯಲ್–ಪ್ರೇಮಪೂರಿತ ವ್ಯಾಮೋಹವು, ಪೆರುಗುಮ್–ವೃದ್ಧಿ ಹೊಂದಿಸುತ್ತಿರುವ, ಇರಾಮಾನುಶನ್–ರಾಮಾನುಜರ ಯಾವ, ಮನ್ನು–ಒಂದಕ್ಕೊಂದು ಬೆಳೆದು, ಮಾ–ಹೆಚ್ಚಿನ ಪೂಜ್ಯವಾದ, ಮಲರ್–ಪುಷ್ಪಗಳ ರೀತಿ ಭೋಗ್ಯವಾದ, ತಾಳ್–ತಿರುವಡಿಗಳನ್ನು, ಅಯರೇನ್–ಮರೆಯೆ, ಅರು–ನಾಶ ಮಾಡಲು ಅಶಕ್ಯವಾದ, ವಿನೈ–ಪಾಪವು, ಎವ್ವಾರು–ಯಾವ ರೀತಿಯಲ್ಲೂ, ಎನ್ನೈ–ದಾಸನಾದ ನನ್ನನ್ನು, ಇನ್ರು–ಈಗ, ಅಡರ್ಪ್ಪದು–ಬಾಧಿಸದು.

ಓ ಚೇತನರೇ! ಶ್ರೀ ರಾಮಾನುಜರನ್ನು ಬಿಟ್ಟು ಬೇರೊಬ್ಬ ದೇವರು ನನಗೆ ಇಲ್ಲ. ನೀಚ ಮಾನವರ ಬಳಿಗೆ ಹೋಗಿ, ಅವರನ್ನೇ ದಾನಶೂರನೆಂದೂ, ಔದಾರ್ಯ ಶೀಲನೆಂದೂ ಬಗೆ ಬಗೆಯಾಗಿ ಕವನ ಕಟ್ಟಿ ಹಾಡಿ, ಸ್ತುತಿಸುವುದಕ್ಕೆ ನನ್ನ ಸ್ವರೂಪವು ಎಂದಿಗೂ ಹೋಗದು. ಶ್ರೀರಂಗ ಎಂದು ಹೇಳಿದ ಮಾತ್ರಕ್ಕೇ (ಏನೆಲ್ಲಾ ಕಾಮನೆ ಗಳು ಕೈಗೂಡುವವೆಂದು) ಭಗವಂತನಲ್ಲಿ ತಲ್ಲೀನರಾಗಿ ಪರವಶರಾಗುವ ಶ್ರೀರಾಮಾನುಜರ ಪಾದಾರವಿಂದಗಳನ್ನು ಇನ್ನು ಒಂದು ನಿಮಿಷವೂ ಮರೆತು

ಇರಲಾರೆನು. ಇಂತಹ ದೃಢಾಧ್ಯವಸಾಯವು ನನಗೆ ಇರಬೇಕಾದರೆ ಪಾಪಗಳು ನನ್ನ ಬಳಿ ಬರಲು ದಾರಿಯೇ ಇಲ್ಲವೆನ್ನುತ್ತಾರೆ.

**ಅಡಲ್ಕೊಂಡ ನೇಮಿಯ ನಾರುಯಿರ್ ನಾದನ್, ಅನ್ರಾರಣಚ್ಚೊಲ್**
**ಕಡಲ್ಕೊಂಡ ವೊಣ್ಪೊರುಳ್ ಕಂಡಳಿಪ್ಪ,**
**ಪಿನ್ನುಂಕಾಶಿನಿಯೋರ್**
**ಇಡರಿನ್ಗಣ್ ವೀಳ್ನ್ದಿಡತ್ತಾನುಮವ್ವೊಣ್ಪೊರುಳ್**
**ಕೊಂಡವರ್ ಪಿನ್**
**ಪಡರುಂಗುಣನ್, ಎಮ್ಮಿರಾಮಾನುಶನ್ರನ್ ಪಡಿಯಿದುವೇ. 36**

ಅಡಲ್ ಕೊಂಡು–ವಿರೋಧಿಗಳನ್ನು ತಿರಸ್ಕರಿಸುವ ಶಕ್ತಿಯುಳ್ಳ, ನೇಮಿಯನ್–ಸುದರ್ಶನಧಾರಿಯಾದ, ಆರುಯಿರ್–ಸಕಲಾತ್ಮರಿಗೂ, ನಾದನ್–ಸ್ವಾಮಿಯಾದ ಸರ್ವೇಶ್ವರನು, ಅನ್ರು–ಆಗ (ಅರ್ಜುನನು ಶೋಕಾಕುಲನಾಗಿರುವಾಗ), ಆರಣಚ್ಚೊಲ್–ವೇದ ಶಬ್ದಗಳಿಂದಲೂ, ಕಡಲ್–ಸಮುದ್ರದೊಳಗೆ, ಕೊಂಡ–ಯಾರಿಗೂ ತಿಳಿಯದಂತೆ ಅವಿತುಕೊಂಡಿದ್ದ ರತ್ನವನ್ನು ತಂದುಕೊಡುವಂತೆ, ಒಣ್–ವಿಲಕ್ಷಣವಾದ, ಪೊರುಳ್–ಅರ್ಥಗಳನ್ನು, ಕಂಡು–ತಿಳಿಸಿ, ಅಳಿಪ್ಪ–ಲೋಕದ ಎಲ್ಲ ಸಂಸಾರಿಗಳಿಗೂ ಉಜ್ಜೀವನಾರ್ಥವಾಗಿ ಪ್ರಸಾದಿಸಿದುದನ್ನು, ಪಿನ್ನುಮ್–ಮತ್ತೆ ಈಗ, ಕಾಶಿನಿಯೋರ್–ಈ ಭೂಲೋಕವಾಸಿಗಳಿಗೆ, ಇಡರಿನ್ ಗಣ್–ಬದ್ಧ ಸಂಸಾರ ದುಃಖದಿಂದ, ವೀಳ್ನ್ದಿಡ–ಬಳಲುತ್ತಿರಲು, ತಾನುಮ್–ಯಾವ ರಾಮಾನುಜರೂ ಸಹ, ಅ–ಹಿಂದೆ ಸರ್ವೇಶ್ವರನು ಬೋಧಿಸಿದ, ಒಣ್–ಅದ್ವಿತೀಯ ಗುಣ ಗಳಿಂದ ವಿಲಕ್ಷಣವಾದ, ಪೊರುಳ್–ಅರ್ಥವಿಶೇಷಗಳನ್ನು, ಕೊಂಡು–ತಿಳಿಸುತ್ತಾ, ಅವರ್–ಆ ಮನುಷ್ಯರನ್ನು, ಪಿನ್ ಪಡರುಮ್–ಹಿಂಬಾಲಿಸಿ ತಿಳಿಸಿದ, ಕುಣನ್–ಗುಣವಂತರಾದ, ಎಮ್–ನಮಗೆ ಪೂರ್ಣಾನುಭವದಿಂದ ಕೂಡಿದ, ಇರಾಮಾನುಶನ್ ತನ್–ಎಂಬೆರುಮಾನರ ಯಾವ, ಪಡಿ–ಸ್ವಭಾವವು, ಇದುವೇ–ಇಷ್ಟೇ ಎಂದು ಹೇಳಲಾಗದು.

ಅರಿಭಯಂಕವಾದ ಸುದರ್ಶನವನ್ನು ಅಯುಧವಾಗಿ ಉಳ್ಳ ಸರ್ವೇಶ್ವರನು ಮಹಾಭಾರತ ಯುದ್ಧ ಕಾಲದಲ್ಲಿ, ಬಂಧು ವ್ಯಾಮೋಹದಿಂದ ಬಂಧಿತನಾಗಿ ಅರ್ಜುನನು ಯುದ್ಧ ಮಾಡಲಾರೆನೆಂದು ನಿಂತಾಗ, ಪಾರ್ಥಸಾರಥಿಯಾಗಿದ್ದು ವೇದಾಂತವೆಂಬ ಸಮುದ್ರದಲ್ಲಿ ಅಡಗಿದ್ದ ರತ್ನಗಳೆಂಬ ವೇದೋಕ್ತಿಗಳಿಂದ ಭಗವದ್ಗೀತೆಯನ್ನು ಏಳುನೂರು ಶ್ಲೋಕಗಳಲ್ಲಿ ಬೋಧಿಸುವ ಮೂಲಕ ಸಕಲ ಚೇತನರ ಉದ್ಧಾರ ಮಾಡಿದಂತೆಯೇ, ಈ ಕಾಲದಲ್ಲಿ ಭೂಲೋಕದ ಜನರು ಭಗವದ್ಗೀತೆಯನ್ನಾಗಲೀ

ಮತ್ತಾವುದನ್ನಾಗಲೀ ಅರ್ಥಮಾಡಿಕೊಳ್ಳಲು ಶಕ್ತಿಯಿಲ್ಲದೆ ಸಂಸಾರ ದುಃಖದಲ್ಲಿ ತೊಳಲುತ್ತಿರುವ ಜೀವರಿಗೆ, ತಮ್ಮ ನಿರ್ಹೇತುಕ ಕೃಪೆಯಿಂದ ಭಗವದ್ಗೀತೆಯ ವ್ಯಾಖ್ಯಾನವನ್ನು ಅದರ ಅರ್ಥ ವಿಶೇಷಗಳನ್ನು ಮನನ ಮಾಡಿಸಲು ಯೋಗ್ಯವಾದ ರೀತಿಯಲ್ಲಿ ಅವರನ್ನೇ ಅನುಸರಿಸಿದ ಮಹಾತ್ಮರು ಶ್ರೀಮದ್ರಾಮಾನುಜರು. ಆತ್ಮೋ ಜೀವನದ ವಿಷಯದಲ್ಲಿ ಇಷ್ಟವುಳ್ಳ ಚೇತನರೆಲ್ಲರೂ, ಪರಮ ಕಾರುಣಿಕರಾದ ರಾಮಾನುಜರನ್ನು ಆಶ್ರಯಿಸಿ ಉದ್ಧಾರವಾಗಬೇಕೆನ್ನುತ್ತಾರೆ.

**ಪಡಿಕೊಂಡಕೀರ್ತಿಯಿರಾಮಾಯಣಮೆನ್ನುಮ್, ಪತ್ತಿವೆಳ್ಳಮ್,**
**ಕುಡಿಕೊಂಡ ಕೋಯಿಲಿರಾಮಾನುಶನ್ ಕುಣಂಗೂರುಮ್,**
**ಅನ್ಬರ್**
**ಕಡಿಕೊಂಡ ಮಾಮಲರ್ತಾಳ್ ಕಲಂದುಳ್ಳಕ್ಕನಿಯುಂ**
**ನಲ್ಲೋರ್**
**ಅಡಿಕಂಡು ಕೊಂಡುಗನ್ದು, ಎನ್ನೈಯುಮಾಳ**
**ವರ್ಕಾಕ್ಕಿನರೇ.** 37

ಪಡಿ–ಭೂಮಿಯೆಲ್ಲವನ್ನೂ, ಕೊಂಡಕೀರ್ತಿ–ವ್ಯಾಪಿಸಿಕೊಂಡಿರುವ ಕೀರ್ತಿಯುಳ್ಳ, ಇರಾಮಾಯಣಮೆನ್ನುಮ್–ಶ್ರೀಮದ್ರಾಮಾಯಣವೆನ್ನುವ, ಪತ್ತಿ ವೆಳ್ಳಮ್–ತಮ್ಮ ಭಕ್ತಿ ಎಂಬ ಸಮುದ್ರದಲ್ಲಿ, ಕುಡಿಕೊಂಡ–ನಿತ್ಯ ವಾಸ ಮಾಡುತ್ತಿರುವ, ಕೋಯಿಲ್–ಒಂದು ದೇವಸ್ಥಾನವೋ ಎಂಬಂತೆ ಇರುವ, ಇರಾಮಾನುಶನ್–ರಾಮಾನುಜಾಚಾರ್ಯರ, ಕುಣಮ್–ದಿವ್ಯಗುಣಗಳನ್ನು, ಕೂರುಮ್–ಅನುಸಂಧಾನ ಮಾಡುತ್ತಿರುವ, ಅನ್ಬರ್–ಭಕ್ತರಯಾವ, ಕಡಿಕೊಂಡ–ಸುವಾಸನೆಯುಳ್ಳ, ಮಾ–ಶ್ಲಾಘ್ಯವಾದ, ಮಲರ್–ಪುಷ್ಪದೋಪಾದಿಯಲ್ಲಿರುವ, ತಾಳ್–ಶ್ರೀಪಾದಗಳಲ್ಲಿ, ಉಳ್ಳಮ್–ಮನಸ್ಸೆಂಬುದು, ಕಲಂದು–ಕೂಡಿ, ಕನಿಯುಮ್–(ಬಿತ್ತಿದ ಬೆಳೆಯಂತೆ) ಸ್ನೇಹವುಳ್ಳ, ನಲ್ಲೋರ್–(ಕೂರತ್ತಾಳ್ವಾರರ ರೀತಿಯ) ವಿಲಕ್ಷಣ ಗುಣವುಳ್ಳ ಯಾವ ಶ್ರೀವೈಷ್ಣವರು (ಈ ಆತ್ಮವು ಭಗವದಧೀನವೆಂಬ), ಅಡಿ–ಇದರ ಯಾವ ಮೂಲವನ್ನು, ಕಂಡು–ತಿಳಿದುಕೊಂಡು, ಉಕನ್ದು–ಸಂತೋಷಿಸಿ, ಎನ್ನೈಯುಮ್–ನನ್ನನ್ನು, ಕೊಂಡು–ಅಂಗೀಕರಿಸಿ, ಅವರ್ಕು–ಆ ರಾಮಾನುಜರಿಗೆ, ಆಳ್ ಆಕ್ಕಿನರ್–ಶೇಷನಾಗುವಂತೆ ಮಾಡಿದರು.

ವಿಶ್ವವ್ಯಾಪಿಯಾಗಿ ಪ್ರಸಿದ್ಧಿ ಹೊಂದಿರುವ ಶ್ರೀಮದ್ರಾಮಾಯಣವೆಂಬುದು ಭಕ್ತಿಯ ಒಂದು ಸಮುದ್ರವೇ ಹೌದು. ಅದರಲ್ಲಿ ನಿತ್ಯವಾಸವಾಗಿ ದೇವಾಲಯದೋಪಾದಿಯಲ್ಲಿರುವ ರಾಮಾನುಜರ ಕಲ್ಯಾಣಗುಣಗಳನ್ನು ಸಂಕೀರ್ತನ ಮಾಡುವ

ಭಕ್ತರ ಹೆಚ್ಚಾದ ಪರಿಮಳವು ಉಳ್ಳ ಪಾದಪದ್ಮಗಳಲ್ಲಿ ಹೃದಯವು ಸಕ್ತವಾಗಿ, ಸ್ನೇಹವನ್ನು ಹೊಂದಿರುವ ಮಹಾನುಭಾವರು, ಆತ್ಮನು ಸ್ವಾಮಿಗೆ ಶೇಷನು ಎಂಬ ಮೂಲ ತತ್ವವನ್ನು ತಿಳಿದುಕೊಂಡು, ಪ್ರೇಮದಿಂದ ಸಕಲರಿಗೂ ಅದನ್ನು ಬೋಧಿಸಿದ ಮಹಾತ್ಮರಾದ ರಾಮಾನುಜರ ಶ್ರೀಪಾದಾರವಿಂದಗಳನ್ನು ಆಶ್ರಯಿಸುವಂತೆ ಮಾಡಿ ನನ್ನನ್ನು ಧನ್ಯನನ್ನಾಗಿಸಿರುವರು.

**ಆಕ್ಕಿಯಡಿಮೈನಿಲೈಪ್ಪಿತ್ತನ್ನೈ, ಯೆನ್ನೈ ಯಿನ್ರವಮೇ**
**ಪೋಕ್ಕಿಪ್ಪುರತ್ತಿಟ್ಟದೆನ್ ಪೊರುಳಾ, ಮುನ್ಬುಪುಣ್ಣಿಯರ್‌ದಮ್**
**ವಾಕ್ಕಿಲ್‌ಪಿರಿಯಾವಿರಾಮಾನುಶನಿನ್ನರುಳಿನ್ ವಣ್ಣಮ್**
**ನೋಕ್ಕಿಲ್ ತೆರಿವರಿದಾಲ್,**
**ಉರೈಯಾಯಿನ್ದನುಣ್ಪೊರುಳೇ. 38**

ಎನ್ನೈ–ನನ್ನನ್ನು, ಆಕ್ಕಿ–ಶೇಷತ್ವಕ್ಕೆ ಸಮ್ಮತಿಸುವಂತೆ ಮಾಡಿ, ಅಡಿಮೈ–ದಾಸ್ಯತ್ವದಲ್ಲಿ, ನಿಲೈಪ್ಪಿತ್ತನ್ನೈ–ಸ್ಥಿರವಾಗಿರುವಂತೆ ಮಾಡಿದ ನೀವು, ಇನ್ರು–ಈಗ ಈ ರೀತಿ ಮಾಡಿಕೊಂಡಿರುವಾಗ್ಯೆ, ಮುನ್ಬು–ಹಿಂದೆ ಕಳೆದ ಕಾಲವೆಲ್ಲವೂ, ಅವಮೇ–ವ್ಯರ್ಥವಾಗಿ, ಪೋಕ್ಕಿ–ಹೋಗಲು ಬಿಟ್ಟು, ಪುರತ್ತು–ಇತರ ವಿಷಯಗಳಲ್ಲಿ, ಇಟ್ಟದು–ಇಟ್ಟದ್ದು, ಎನ್‌ಪೊರುಳಾ–ಯಾವ ಕಾರಣಕ್ಕೋಸ್ಕರ, ಪುಣಿಯರ್‌ದಮ್–ಮಹಾತ್ಮರಾದ ತಮ್ಮನ್ನು ಗುರುವೆಂದರಿವ ಭಾಗ್ಯವಂತರ, ವಾಕ್ಕಿಲ್–ಬೋಧೆಯಂದು (ಮಾತುಗಳಲ್ಲಿ), ಪಿರಿಯಾ–ಅನ್ಯಥಾ ಭಾವಿಸದಿರುವ, ಇರಾಮಾನುಶ–ಓ ರಾಮಾನುಜ ಮುನಿಯೇ! ನಿನ್–ನಿಮ್ಮ ಯಾವ, ಅರುಳಿನ್–ಕರುಣೆಯೆಂಬುದರ, ವಣ್ಣಮ್–ವಿಧವನ್ನು, ನೋಕ್ಕಿಲ್–ನೋಡಿದಾಗ, ತೆರಿವರಿದು–ತಿಳಿದುಕೊಳ್ಳುವಂತಹದಾಗಿದೆ, ಇನ್ದು–ಈ, ನುಣ್–ಸೂಕ್ಷ್ಮವಾದ, ಪೊರುಳ್–ಪರಮಾರ್ಥವನ್ನು, ಉರೈಯಾರ್–ಮಹಾತ್ಮರಾದ ತಾವೇ ಕರುಣಿಸಬೇಕು.

ಭಾಗವತೋತ್ತಮರಿಂದ ಸಂಕೀರ್ತನೆ ಮಾಡಿಸಿಕೊಳ್ಳುತ್ತಿರುವ ದಿವ್ಯ ಗುಣಗಳ ಓ ರಾಮಾನುಜರೇ! ನೀವು ನಿತ್ಯವಾಸ ಮಾಡುತ್ತಿರುವ ದಿವ್ಯದೇಶದಲ್ಲಿಯೇ ನಾನು ಎಷ್ಟೋ ಕಾಲದಿಂದ ಜೀವಿಸಿದ್ದರೂ ನನ್ನನ್ನು ಇದುವರೆಗೂ ಅಂಗೀಕರಿಸದೆ, ಉದಾಸೀನರಾಗಿದ್ದು, ಈಗ ವಿಷಯಾಸಕ್ತಿಗಳಲ್ಲಿ ಮುಳುಗಿರುವ ನನ್ನನ್ನು, ಕೂರತ್ತಾಳ್ವಾರರ ಮುಂದೆ ನಿಲ್ಲಿಸಿ, ತಿದ್ದಿ ಸರಿಪಡಿಸಲು ಆಣತಿಯಿತ್ತು, ಶೇಷತ್ವವನ್ನು ಒಪ್ಪಿಕೊಳ್ಳುವಂತೆ ಮಾಡಿದಿರಿ, ಅಲ್ಲದೆ, ತದೀಯ ಶೇಷತ್ವ ಪರ್ಯಂತ ಅಪೇಕ್ಷೆ ಹೊಂದುವಂತೆ ಮಾಡಿದ ನೀವು, ಇದುವರೆಗೂ ಅನುಗ್ರಹಿಸದೆ, ವಿಷಯಾಂತರಗಳಲ್ಲಿ ವ್ಯರ್ಥವಾಗಿರುವಾಗ ಕರುಣೆ ತೋರಲು ಕಾರಣವೇನೋ? ಮಹಾತ್ಮರಾದ

ತಮ್ಮ ಕೃಪೆಯನ್ನು ಯಾವ ರೀತಿಯಲ್ಲೂ ಗುರುತಿಸಲು ಅಶಕ್ಯವಾಗಿರುವುದು, ತಾವೇ ಅದರ ಸೂಕ್ಷ್ಮಾರ್ಥ—ವನ್ನು ನನಗೆ ತಿಳಿಯುವಂತೆ ಮಾಡಬೇಕು.

**ಪೊರುಳುಮ್ ಪುದಲ್ವರುಮ್ ಪೂಮಿಯುಂ,**
**ಪೂಂಗುಳಲಾರುಮೆನ್ರೇ,**
**ಮರುಳ್ ಕೊಂಡಿಳೈಕ್ಕುಮ್ ನಮಕ್ಕು ನೆಂಗೇ,**
**ಮತ್ತುಳಾರ್‌ದರವೊ**
**ಇರುಳ್‌ಗೊಂಡವೆಮ್ದುಯರ್ ಮಾತ್ತಿತ್ತನ್ನೀರಿಲ್‌ಪೆರುಂಬುಗಳೇ**
**ತೆರುಳುಮ್ ತೆರುಳ್‌ತನ್ದು,**
**ಇರಾಮಾನುಶನ್ ಶೆಯ್ಯುಮ್ ಶೇಮಂಗಳೇ 39**

ಪೂರುಳುಮ್ — ಧನಕನಕವನ್ನೂ, ಪುದಲ್ವರುಮ್ — ಮಕ್ಕಳನ್ನೂ, ಪೂಮಿಯುಮ್—ಭೂಮಿಯನ್ನೂ, ಪೂ—ರಮ್ಯವಾದ, ಕುಳಲಾರುಮ್—ಸುಂದರ ಸ್ತ್ರೀಯರನ್ನೂ, ಎನ್ರೇ—ಇವುಗಳನ್ನೇ (ಬಯಸಿ), ಮರುಳ್‌ಕೊಂಡ—ಬುದ್ಧಿಕೆಟ್ಟು, ಇಳೈಕ್ಕುಮ್—ದುಃಖದಿಂದ ಕೂಡಿದ, ನಮಕ್ಕು—ನಮಗೆ, ಇರುಳ್‌ಕೊಂಡ—ಅಜ್ಞಾನವೆಂಬ ಅಂಧಕಾರದಲ್ಲಿದ್ದ, ವೆಮ್—ಕ್ರೂರವಾದ, ತುಯರ್—ವ್ಯಸನಗಳನ್ನು, ಮಾತ್ತಿ—ಹೋಗಲಾಡಿಸಿ, ತನ್—ತಮ್ಮ ಯಾವ, ಈರುಮ್ಪೈ—ನಿತ್ಯವಾದ, ಪೆರುಮ್—ನಿರವಧಿಕವಾದ, ಪುಗಳ್—ದಿವ್ಯ ಕಲ್ಯಾಣಗುಣಗಳನ್ನೇ, ತೆರುಳುಮ್—ತಿಳಿಯುವಂತಹ, ತೆರುಳ್—ಜ್ಞಾನವನ್ನು, ತಂದು—ಕೊಟ್ಟು, ಇರಾಮಾನುಶನ್—ಶ್ರೀಮದ್ರಾಮಾನುಜಾಚಾರ್ಯರು, ಶೆಯ್ಯುಮ್—ಮಾಡುತ್ತಿರುವ, ಶೇಮಂಗಳ್—ಕ್ಷೇಮಗಳು, ನೆಂಗೇ—ಓ ಮನಸ್ಸೇ!, ಮತ್ತುಳಾರ್‌ತರವೊ—ಮತ್ತೊಬ್ಬರಿಂದ ಮಾಡಲು ಸಾಧ್ಯವಾಗುವುದೇ ?

ಓ ಮನಸ್ಸೇ ! ದಾರಾ, ಪುತ್ರ, ಗೃಹ, ಧನಗಳೆಂಬ ಅಪ್ರಾಪ್ತ ವಿಷಯಗಳಲ್ಲಿ ವ್ಯಾಮೋಹವನ್ನು ಹೊಂದಿ, ಜ್ಞಾನಹೀನರಾಗಿ ಬಾಧೆ ಪಡುತ್ತಿದ್ದ, ನಮ್ಮ ದುರ್ವ್ಯಸನಗಳನ್ನು ನಾಶಪಡಿಸಿ, ನಿತ್ಯವೂ, ನಿರವಧಿಕವೂ ಆಗಿರುವ ತಮ್ಮ ಕಲ್ಯಾಣ ಗುಣ ಸಮೂಹಗಳೆಲ್ಲವನ್ನೂ ಹೊಂದುವಂತ ಜ್ಞಾನವನ್ನು ತಂದು ಕೊಟ್ಟು ರಾಮಾನುಜರು ಮಾಡಿದಂತಹ ಕಾರ್ಯವು ಮತ್ತ್ಯಾರಿಂದಲಾದರೂ ಮಾಡಲು ಸಾಧ್ಯವೇ ?

**ಶೇಮನಲ್ವೀಡುಮ್ ಪೊರುಳುಮ್ ತರುಮಮುಮ್,**
**ಶೀರಿಯನ**
**ಕಾಮಮುಮೆನ್ರಿವೈನಾನ್ಗೆನ್ಬರ್,**
**ನಾನ್ಗಿನುಮ್ ಕಣ್ಣನುಕ್ಕೇ**
**ಯಾಮದು ಕಾಮಮರಂಪ್ಪೊರುಳ್ ವೀಡಿದರ್ಕೆನ್ರುರೈತ್ತಾನ್**
**ವಾಮನನ್ ಶೀಲನ್, ಇರಾಮಾನುಶನಿನ್ದ ಮಣ್ಮಿಶೈಯೇ.** 40

ವಾಮನನ್–ವಾಮನಾವತಾರದ ಸ್ವಾಮಿಯ ಯಾವ, ಶೀಲನ್–ಸ್ವಭಾವವುಳ್ಳ, ಇರಾಮಾನುಶನ್–ರಾಮಾನುಜರು, ಶೇಮಮ್–ಕ್ಷೇಮರೂಪವಾದ, ನಲ್–ಉತ್ಕೃಷ್ಟವಾದ, ವೀಡುಮ್–ಮೋಕ್ಷವನ್ನು, ಪೊರುಳುಮ್–ಧನ ಕನಕ ಸಂಪತನ್ನೂ, ತರುಮಮುಮ್–ಧರ್ಮವನ್ನೂ, ಶೀರಿಯ–ಶ್ಲಾಘ್ಯವಾದ, ನಲ್–ವಿಲಕ್ಷಣವಾದ, ಕಾಮಮುಮ್–ಆಸೆಯನ್ನು, ಎನ್ರು–ಆ ರೀತಿ, ಇವೈನಾನ್ಗು–ಇವೇ ಚತುರ್ವಿಧ ಪುರುಷಾರ್ಥಗಳೆನ್ನುವುವು, ನಾಂಗಿನುಮ್–ಈ ನಾಲ್ಕರಲ್ಲಿ, ಕಣ್ಣನುಕ್ಕೇ–ಸರ್ವೇಶ್ವರನಲ್ಲಿಯೇ, ಆಮದು–ಆಗುವಂತೆ, ಕಾಮಮುಮ್–ಅಭಿನಿವೇಶವು (ಕಾಮಪುರುಷಾರ್ಥವೆನ್ನಬಹುದಾದ), ಇದರ್ಕು–ಈ ಕಾಮ ಪುರುಷಾರ್ಥಕ್ಕೆ, ಅರಮ್–ಧರ್ಮವನ್ನೂ, ಪೊರುಳ್–ಅರ್ಥವನ್ನೂ, ವೀಡು–ಮೋಕ್ಷವನ್ನೂ (ಶೇಷವಾಗಿ ಸಂಬಂಧವಿರುವುದು), ಎನ್ರು–ಎಂದು, ಇಂದ–ಈ, ಮಣ್ಮಿಶೈ–ಭೂಮಿಯಲ್ಲಿ, ಉರೈತ್ತಾನ್–ಉಪದೇಶಿಸಿದರು.

ವೈದಿಕರು ಸಾಮಾನ್ಯವಾಗಿ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ಫಲಪುರುಷಾರ್ಥಗಳು ನಾಲ್ಕು ಎಂದು ಹೇಳುತ್ತಾರೆ. ಶ್ರೀ ವಾಮನಮೂರ್ತಿಯು ಭೂಲೋಕದಲ್ಲಿನವರು ಅಪೇಕ್ಷಿಸದೆ ಇದ್ದರೂ, ಸಕಲ ಚರಾಚರಗಳ ಶಿರಸ್ಸಿನ ಮೇಲೂ ತನ್ನ ಚರಣವನ್ನು ಚಾಚಿ ಎಲ್ಲರನ್ನೂ ಪುಣ್ಯವಂತರನ್ನಾಗಿ ಮಾಡಿದಂತೆಯೇ ಸ್ವಭಾವವುಳ್ಳ ರಾಮಾನುಜರು ಶ್ರಿಯಃಪತಿಯಲ್ಲಿನ ಮೋಹವೆಂಬುದೇ ಕಾಮ ಪುರುಷಾರ್ಥವೆಂದೂ, ಧರ್ಮ, ಅರ್ಥ ಮತ್ತು ಮೋಕ್ಷಗಳು ಅದಕ್ಕೆ ಶೇಷ ಸಂಬಂಧಿಯಾಗಿರುವುವು ಎಂದು ತಮ್ಮ ಕೃಪಾಕಟಾಕ್ಷದಿಂದ ಸಕಲ ಚೇತರಿಗೆ ಉಪದೇಶಿಸಿರುವರು.

ಮತ್ತೊಂದು ವ್ಯಾಖ್ಯಾನ ಈ ರೀತಿ ಇರುವುದು:

ವಾಮನನ್ ಶೀಲನ್–ವಾಮನಮೂರ್ತಿಯ ಸ್ವಭಾವವನ್ನು, ಉರೈತ್ತಾನ್–ಕರುಣಿಸಿದರು. ಸರ್ವೇಶ್ವರನಲ್ಲಿ ಉಂಟಾಗುವ ಕಾಮವು ಶ್ಲಾಘ್ಯವಾದರೂ, ಅವನು ಸುಲಭವಾಗಿ ಲಭ್ಯವಾಗುತ್ತಾನೆಯೇ ಎಂದು ಲೌಕಿಕರು ಸಂದೇಹ ಪಡುವುದು ಸಾಮಾನ್ಯ. ಶ್ರೀ ವಾಮನಾವತಾರದಲ್ಲಿ ಸರ್ವೇಶ್ವರನು, ಭೂಲೋಕದವರ

ಬೇಡಿಕೆಯೇ ಇಲ್ಲದಿದ್ದರೂ ತನ್ನ ಶ್ರೀ ಪಾದವನ್ನು ಭೂಮಿಯ ಎಲ್ಲರ ಮೇಲೂ ವಿಸ್ತರಿಸಿ ಎಲ್ಲರನ್ನೂ ಉದ್ಧರಿಸಿದುದರಿಂದ, ಸರ್ವೇಶ್ವರನು ಸುಲಭನೇ ಹೌದು ಎಂಬ ಸತ್ಯವನ್ನು ರಾಮಾನುಜರು ಲೋಕಕ್ಕೆ ತಿಳಿಯಪಡಿಸಿದರು.

**ಮಣ್ಮಿಶೈಯೊನಿಗಳ್ ದೋರುಮ್ಪಿರನ್ದು, ಎಂಗಳ್ ಮಾದವನೇ**
**ಕಣ್ಣುರ ನಿರ್ಕಿಲುಮ್ ಕಾಣಗಿಲ್ಲಾ, ಉಲಗೋರ್ಗಳೆಲ್ಲಾಮ್**
**ಅಣ್ಣಲಿರಾಮಾನುಶನ್ ವನ್ದು ತೋನ್ರಿಯ ಅಪ್ಪೊಳುದೇ**
**ನಣ್ಣರುಂಗಾನಮ್ ತಲೈಕ್ಕೊಂಡು, ನಾರಣರ್ಕಾಯಿನರೇ. 41**

ಮಣ್ಮಿಶೈ–ಈ ಭೂಲೋಕದಲ್ಲಿ, ಯೋನಿಗಳ್ ದೋರುಮ್–ಮನುಷ್ಯ ಪಶುಪಕ್ಷಿಯಾದಿ ಸಕಲ ಜಾತಿಗಳಲ್ಲಿಯೂ, ಪಿರನ್ದು–ಅವತರಿಸಿ, ಎಂಗಳ್–ನಮಗೆ ಸ್ವಾಮಿಯಾದ, ಮಾದವನ್ನೆ–ಶ್ರಿಯಃಪತಿಯೇ, ಕಣ್–ನೇತ್ರಗಳಿಗೆ, ಉರ–ಕಾಣು ವಂತೆ, ನಿಕ್ಕಿಲುಮ್–ನಿಂತಿದ್ದರೂ, ಕಾಣಗಿಲ್ಲಾ–ಕಾಣಲು ಅಶಕ್ತರಾಗಿ (ಅವನನ್ನು ಆಶ್ರಯಿಸಿ ಉದ್ಧಾರವಾಗದಿರುವ) ಉಲಕೋರ್‌ಗಳ್ ಎಲ್ಲಾಮ್–ಲೋಕದ ಎಲ್ಲರಿಗೂ, ಅಣ್ಣಲ್–ಸ್ವಾಮಿಯಾದ, ಇರಾಮಾನುಶನ್–ಶ್ರೀಮದ್ರಾಮಾನುಜರು, ವನ್ದು–ಬಂದು, ತೋನ್ರಿಯ–ಅವತರಿಸಿದ, ಅಪ್ಪೊಳುದೇ–ಕೂಡಲೇ, ನಣ್‌ಅರು–(ಸ್ವಪ್ರಯತ್ನದಿಂದ) ಹೊಂದಲಸಾಧ್ಯವಾದ, ಜ್ಞಾನಮ್–ಜ್ಞಾನವು, ತಲೈಕ್ಕೊಂಡು–ಅತಿಶಯವೆಂಬಂತೆ, ನಾರಣರ್ಕು–ಸರ್ವೇಶ್ವರನಿಗೆ, ಆಯಿನರ್–ದಾಸಭೂತರಾದರು.

ಭೂಲೋಕದಲ್ಲಿ ಬದ್ಧ ಸಂಸಾರಿಕರನ್ನು ಸಂರಕ್ಷಿಸುವುದಕ್ಕೋಸ್ಕರ ಸರ್ವೇಶ್ವರನು ಮನುಷ್ಯತಿರ್ಯಗಾದಿ, ಅನೇಕ ಅವತಾರಗಳನ್ನೆತ್ತಿ ಸುಲಭವಾಗಿ ಕಣ್ಣೆದುರಿಗೆ ನಿಂತಿದ್ದರೂ ಗುರುತಿಸಲಾರದೆ, ಅವನ ಮಹಿಮೆಯನ್ನರಿಯದೆ ಹೋದರೂ. ನಮಗೆ ತಂದೆ ಯಂತಿರುವ ರಾಮಾನುಜಾಚಾರ್ಯರು, ಅವತರಿಸಿದ ಬಳಿಕ, ಅವರ ಅನುಗ್ರಹ ವಿಶೇಷ ದಿಂದ, ಸಂಸಾರಿಗಳಾದ ಚೇತನರು, ಉತ್ತಮ ಜ್ಞಾನಾನುಷ್ಠಾನ ಸಂಪನ್ನರಾಗಿ, ಶ್ರೀಮನ್ನಾರಾಯಣನೇ ತಮಗೆ ಸರ್ವ ಪ್ರಾಕಾರಗಳಲ್ಲಿನ ಚೇತನನು, ಪ್ರಾಪ್ತ ಶೇಷಿಯು ಎಂಬುದನ್ನು ತಿಳಿದು ಆಶ್ರಯಿಸಿದರು.

**ಆಯಿಳೈಯೊರ್ ಕೊಂಗೈತಂಗುಮ್, ಅಕ್ಕಾದಲಳತ್ತಳುನ್ದಿ**
**ಮಾಯುಮೆನ್ನಾವಿಯೈವಂದೆಡುತಾನಿನ್ರು, ಮಾಮಲರಾಳ್**
**ನಾಯಗನೆಲ್ಲಾವುಯಿರ್ ಗಟ್ಕುಮ್ ನಾದನರಂಗನೆನ್ನುಮ್**
**ತೂಯವನ್, ತೀದಿಲಿರಾಮಾನುಶನ್ ತೊಲ್ಲರುಳ್‌ಶುರನ್ದೇ. 42**

ಆಯ್–ತಮಗೆ ದೊರಕಿರುವ, ಇಳೈಯಾರ್–ಭೂಷಣಗಳನ್ನು ಹೊಂದಿದ ಸ್ತ್ರೀಯರ ಯೌವ, ಕೊಂಗೈ–ಸ್ತನಗಳಲ್ಲಿ, ತಂಗುಮ್–ಹೊಂದಿರುವ, ಅ–(ಬಾಯಿ ಮಾತಿನಿಂದ ವಿವರಿಸಲಾಗದ) ಅಂತಹ, ಕಾದಲ್–ಆಶೆಯಿಂದ, ಅಳರು–ಕೆಸರಿನಲ್ಲಿ, ಅಳುನ್ದಿ–ಮುಳುಗಿ, ಮಾಯುಮ್–ನಶಿಸಿಹೋಗುತ್ತಿದ್ದ, ಎನ್–ನನ್ನ, ಆವಿಯೈ–ಆತ್ಮನು, ಮಾಮಲರಾಳ್–ಮಹಾಲಕ್ಷ್ಮಿಗೆ, ನಾಯಕನ್–ನಾಥನಾದ, ಅರಂಗನ್–ಶ್ರೀರಂಗನಾಥನು, ಎಲ್ಲಾಉಯಿರ್ ಗಟ್ಕುಮ್–ಸಕಲ ಜೀವರಾಶಿಗಳಿಗೂ, ನಾಥನ್–ಸ್ವಾಮಿ, ಎನ್ನುಮ್–ಎಂದು ಉಪದೇಶಿಸಿದ, ತೂಯವನ್–ಪರಿಶುದ್ಧರಾದ, ತೀದುಯಿಲ್–ಯಾವದೋಷವೂ ಇಲ್ಲದ, ಯಿರಾಮಾನುಶನ್–ರಾಮಾನುಜರು, ತೊಲ್–ಸ್ವಾಭಾವಿಕವಾದ, ಅರುಳ್–ಕೃಪೆಯಿಂದ, ಶುರನ್ದು–ತುಂಬಿದವರಾಗಿ, ವನ್ದು–ಬಂದು, ಇನ್ರು–ಈಗ, ಎಡುತ್ತಾನ್–(ನನ್ನನ್ನು) ಅಧಃಪತನದಿಂದ ಮೇಲೆತ್ತಿ ಉದ್ಧರಿಸಿದರು.

ಅಡಿಯಿಂದ ಮುಡಿಯುವರೆಗೆ ಆಭರಣಗಳನ್ನು ಧರಿಸಿ, ಚಂದನ, ಪುಷ್ಪಾದಿಗಳಿಂದಲೂ, ವಿವಿಧ ವಸ್ತ್ರಗಳಿಂದಲೂ ಅಲಂಕೃತರಾದ ಕನ್ಯೆಯರಿಗೆ ರಮ್ಯವಾಗಿ ಕಾಣಲಿರುವ, ಯುವತಿಯರ ಯೌವ ಕುಚಗಳಲ್ಲಿ ಆಸಕ್ತನಾಗಿ, ಪ್ರೇಮ ಎಂಬ ಕೆಸರಿನಲ್ಲಿ ಸಿಕ್ಕಿಕೊಂಡು ನರಳುತ್ತಿರುವ ನನಗೂ ಅಂತೆಯೇ ಲೋಕದ ಸಕಲಾತ್ಮರಿಗೂ, ಪರಿಶುದ್ಧ ಜ್ಞಾನಾನುಷ್ಠಾನ ಪರಿಪೂರ್ಣರಾದ, ನಿಷ್ಕಾಮರಾದ ರಾಮಾನುಜರು ಸಹಜ ಗುಣವಾದ ಪರಮ ಕೃಪೆಯಿಂದ ಶ್ರಿಯಃಪತಿಯಾದ ಶ್ರೀರಂಗನಾಥನೇ ಸ್ವಾಮಿಯು ಎಂಬುದನ್ನು ಉಪದೇಶಿಸಿ ಉದ್ಧಾರವಾಗುವಂತೆ ಮಾಡಿದರು.

**ಶುರುಕ್ಕುಮ್ ತಿರುವುಮುಣರ್ವುಮ್, ಶೊಲಪ್ಪುಗಿಲ್**
**ವಾಯಮುದಮ್**
**ಪರಕ್ಕುಮಿರುವಿನೈಪತ್ತರವೋಡುಮ್, ಪಡಿಯಿಲುಳ್ಳೀರ್**
**ಉರೈಕ್ಕಿನ್ರ ನೆನುಮಕ್ಕಿಯಾನರಂಗೀರು ಮುರುಗಲಿಯೈ**
**ತ್ತುರಕ್ಕುಮ್ ಪೆರುಮೈ, ಯಿರಾಮಾನುಶನೆನ್ರು**
**ಶೊಲ್ಲುಮಿನೇ.** 43

ಪಡಿಯಿಲ್–(ಉದ್ಯೋಯವರ ಅವತಾರದಿಂದ ಭಾಗ್ಯವಂತಳಾದ) ಭೂಮಿಯಲ್ಲಿ, ಉಳ್ಳೀರ್–ಇರುವ ಓ ಚೇತನರೇ!, ಯಾನ್–(ಅನುಭವದಿಂದ ಅರಿತ) ನಾನು, ಉಮಕ್ಕು–ನಿಮಗೆ, ಉರೈಕ್ಕಿನ್ರನನ್–ಹೇಳುತ್ತಿದ್ದೇನೆ, ಅರಮ್–ಧರ್ಮವನ್ನು, ಶೀರುಮ್–ಸಹಿಸಲಾರದೆ ಕೋಪ ತಾಳುವ, ಉರು–ಪ್ರಬಲವಾದ, ಕಲಿಯೈ–ಕಲಿ(ಶನಿ)ಯನ್ನು, ತುರೈಕ್ಕುಮ್–ನಿವಾರಿಸಿದಂತಹ, ಪೆರುಮೈ–ಮಹತ್ವವನ್ನುಳ್ಳ,

ಯಿರಾಮಾನುಶನ್ ಎನ್ರು–ರಾಮಾನುಜಾ ಎಂಬ ಅವರ ಹೆಸರನ್ನು , ಶೊಲ್ಲುಮಿನ್– ಅನುಸಂಧಾನ ಮಾಡುವವರ , ತಿರುವುಮ್–ಭಕ್ತಿರೂಪವಾದ ಸಂಪತ್ತು , ಉಣರ್ವುಮ್–ಜ್ಞಾನವೂ , ಶುರಕ್ಕುಮ್–ವೃದ್ಧಿಹೊಂದುವುವು , ಶೊಲ್ಲಪ್ಪುಗಿಲ್– (ಅವರ ಯಾವ ತಿರುನಾಮವನ್ನು) ಹೇಳಲು ಆರಂಭಿಸಿದೊಡನೆಯೇ , ವಾಯ್– ವಾಕ್ಕಿನಲ್ಲಿ , ಅಮುದಮ್–ಅಮೃತವು , ಪರಕ್ಕುಮ್–ತುಂಬಿಕೊಳ್ಳುವುದು , ಇರುವಿನೈ–ಮಹಾ ಪಾಪಗಳೆಲ್ಲವೂ , ಪತ್ತುಅರ–(ತಾನೆ ಭಯ ಪಡುತ್ತ) ಸಂಬಂಧವೇ ಇಲ್ಲವೇನೋ ಎಂಬಂತೆ ಕಳಚಿಕೊಂಡು , ಓಡುಮ್–ಪಲಾಯನ ಮಾಡುತ್ತವೆ.

ಓ ಚೇತನರೇ ! ನಾನು ಅನುಭವದಿಂದ ಅರಿತ ವಿಶೇಷವನ್ನು ಹೇಳುವೆನು ಕೇಳಿ. ಧರ್ಮವೃದ್ಧಿಯನ್ನು ಸಹಿಸಲಾರದ ಕಲಿಯನ್ನು ನಿವಾರಿಸಿದಂತಹ ಪ್ರಭಾವಶೀಲರಾದ ಉಡೈಯವರ "ರಾಮಾನುಜ" ಎಂಬ ಚತುರಕ್ಷರ ಮಂತ್ರವನ್ನು ಅನುಸಂಧಾನ ಮಾಡುವವರಿಗೆ ಜ್ಞಾನ, ಭಕ್ತಿ , ವೈರಾಗ್ಯಗಳು ದೊರಕಿ ವೃದ್ಧಿಹೊಂದುವುದು. ಅಂತಹ ತಿರುನಾಮವನ್ನು ಅನುಸಂಧಾನ ಮಾಡಲು ಪ್ರಾರಂಭಿಸಿದೊಡನೆಯೇ , ವಾಕಿನಲ್ಲಿ ಅಮೃತವು ತುಂಬಿಕೊಳ್ಳುವುದು , ಬ್ರಹ್ಮಹತ್ಯವೇ ಮೊದಲಾದ ಪಂಚ ಪಾತಕಗಳೂ ಸಮೂಲವಾಗಿ ಪಲಾಯನ ಮಾಡುತ್ತವೆ.

**ಶೊಲ್ಲಾರ್ ತಮಿಳೊರು ಮೂನ್ರುಮ್,**
**ಶುರುದಿಗಳ್ ನಾನ್ಗುಮೆಲ್ಲೈ**
**ಯಿಲ್ಲಾವರ ನೆರಿಯಾವುಮ್ ತೆರಿನ್ದವನ್ , ಎಣ್ಣರುಂಗೀರ್**
**ನಲ್ಲಾರ್ಪರವು ಮಿರಾಮಾನುಶನ್ಪಿರು ನಾಮಮ್ ನಂಬಿ**
**ಕ್ಕಲ್ಲಾರಗಲಿಡತ್ತೋರ್ , ಎದುಪೇರೆನ್ರು ಕಾಮಿಪ್ಪರೇ. 44**

ಅಕಲ್–ವಿಶಾಲವಾದ , ಇಡತ್ತೋರ್–ಭೂಮಿಯಲ್ಲಿರುವ ಜೀವರು , ಪೇರು– ಪುರುಷಾರ್ಥಗಳು , ಎದು ಎನ್ರು–ಯಾವುವು ಎಂಬುವನ್ನು , ಕಾಮಿಪ್ಪರ್–ಕೋರು ವುದು , ಶೊಲ್ಲಅರ್–ಶಬ್ದಗಳು ತುಂಬಿಕೊಂಡಿರುವಂತಾ , ಒರು–ಅದ್ವಿತೀಯವಾದ , ಮೂನ್ರು–(ಇಯಲ್ , ಇಶೈ , ನಾಡಕಮ್ ಎಂದು) ಮೂರು ವಿಧವಾಗಿರುವ , ತಮಿಳುಮ್–ದ್ರಾವಿಡ ವೇದಗಳಲ್ಲಿರುವ , ನಾನ್ಗು–ನಾಲ್ಕು ಎಂಬ , ಶುರದಿಗಳ್– ಚತುರ್ವೇದಗಳಲ್ಲಿರುವ, ಎಲ್ಲೈಯಿಲ್ಲಾ–ಅನಂತವಾದ , ಅರನೆರಿ–ಧರ್ಮಮಾರ್ಗಗಳಲ್ಲಿ, ಯಾವುಮ್–ಸಮಸ್ತವನ್ನೂ , ತೆರಿನ್ದವನ್–ಚೆನ್ನಾಗಿ ತಿಳಿದವರು , ಎಣ್ಅರುಮ್– ಎಣಿಸಲಸದಳವಾದ , ಶೀರ್–ಕಲ್ಯಾಣ ಗುಣಗಳನ್ನುಳ್ಳವರು , ನಲ್ಲಾರ್–ಸಜ್ಜನರಲ್ಲಿ , ಪರವುಮ್–ಪ್ರೇಮಾತಿಶಯದಿಂದ ಸ್ತೋತ್ರವನ್ನು ಮಾಡಿಸಿಕೊಳ್ಳುವವರಾದ , ಇರಾಮಾನುಶನ್–ರಾಮಾನುಜರ , ತಿರುನಾಮಮ್–ಪವಿತ್ರ ಹೆಸರನ್ನು , ನಂಬಿ–

ನಂಬಿ (ನಾನು ತಿಳಿಸುತ್ತಿರುವ ಈ ವಾರ್ತೆಯನ್ನು ನಂಬಿ), ಕಲ್ಲಾರ್–ಸ್ಮರಿಸುತ್ತಿರು ವರೇ ಎಂದು ಚಿಂತಿಸುತ್ತಿರುವೆ.

ಲೋಕದಲ್ಲಿ ಚೇತನರು ಪುರುಷಾರ್ಥಗಳನ್ನು ಕುರಿತು ಸಂದೇಹಿಸುವರು, ಸಂಸ್ಕೃತ, ದ್ರಾವಿಡ ರೂಪದ ಉಭಯ ವೇದಗಳನ್ನು ಮತ್ತು ಬ್ರಾಹ್ಮಣಗಳನ್ನೂ, ಸ್ಮೃತಿ, ಇತಿಹಾಸಾದಿ ಪುರಾಣ ಸಕಲ ಶಾಸ್ತ್ರಗಳನ್ನೂ ಚೆನ್ನಾಗಿ ತಿಳಿದವರೂ, ಸಮಸ್ತ ಕಲ್ಯಾಣ ಗುಣಾತ್ಮಕರೂ, ಸಕಲ ಸತ್ಪುರುಷರಿಂದ ಸ್ತೋತ್ರ ಮಾಡಲ್ಪಡು ತ್ತಿರುವವರೂ ಆದ ರಾಮಾನುಜರ ದಿವ್ಯವಾದ ತಿರುನಾಮವನ್ನು ಅನುಸಂಧಾನ ಮಾಡಿದೊಡನೆ ಸಕಲ ಪುರುಷಾರ್ಥಗಳು ಸಿದ್ಧಿಸುವುವು, ಇದರಲ್ಲಿ ಸಂಶಯವೇ ಇಲ್ಲ ಎಂಬ ನನ್ನ ಈ ಮಾತುಗಳನ್ನಾದರೂ ನಂಬಿ ಅವರ ದಿವ್ಯ ನಾಮಗಳ ಸ್ಮರಣವನ್ನು ಮಾಡುತ್ತಿಲ್ಲವಲ್ಲಾ ಎಂದು ಚಿಂತಿಸುತ್ತಿರುವೆನು.

**ಪೇರೊನ್ರುಮತ್ತಿಲ್ಲೈ ನಿನ್ ಶರಣನ್ರಿ, ಯಪ್ಪೇರಳಿತ್ತ**
**ರ್ಕಾರೊನ್ರುಮಿಲ್ಲೈ ಮತ್ತಚ್ಚರಣನ್ರಿ, ಯೆನ್ರಿಪ್ಪೊರುಳೈ**
**ತ್ತೇರುಮವರ್ಕುಂ ಎನಕ್ಕುಮುನ್ನೈತ್ತನ್ದ ಶೆಮ್ಮೈ ಶೊಲ್ಲಾರ್**
**ಕೂರುಮಳ್ ಪರಮನ್ರ್, ಇರಾಮಾನುಶಮೆಯ್ಮೈ**
**ಕೂರಿಡಿಲೇ.** 45

ಇರಾಮಾನುಶಾ–ರಾಮಾನುಜರೇ, ನಿನ್‌ಶರಣಮ್ ಅನ್ರಿ–ನಿಮ್ಮ ಯಾವ ಶ್ರೀಪಾದಗಳನ್ನಲ್ಲದೆ, ಮತ್ತು–ಬೇರೆಯವಾದ, ಪೇರು–ಪುರುಷಾರ್ಥವು, ಒನ್ರುಮ್– ಒಂದೂ, ಇಲ್ಲೈ–ಇಲ್ಲವು, ಅಪ್ಪೇರು–ಆ ಫಲವು, ಅಳಿತರ್ಕು–ದೊರಕುವುದಕ್ಕೆ, ಅಚ್ಚರಣ್‌ಅನ್ರಿ–ಆ ಪಾದಾರವಿಂದಗಳಲ್ಲದೆ; ಮತ್ತು–ಬೇರೆಯಾದ, ಅರು–ಉಪಾಯ ಗಳು, ಒನ್ರು–ಒಂದೂ ಸಹ, ಇಲ್ಲೈ–ಇಲ್ಲವು, ಎನ್ರಿ–ಎಂದು, ಇಪ್ಪೊರುಳೈ–ಈ ತತ್ವಾರ್ಥವನ್ನು, ತೇರುಮ್ ಅವರ್ಕುಮ್–ವಾಸ್ತವ್ಯವನ್ನರಿತು ನಂಬಿದವರಿಗೆ, ಎನಕ್ಕುಮ್–ನನಗೂ, ಉನ್ನೈ–ಕೊಡಲು, ತನ್ದ–ಕೊಟ್ಟ, ಶೆಮ್ಮೈ–ಉತ್ತಮ ವಿಧವನ್ನು, ಮೆಯ್‌ಮ್ಮೈ–ಸತ್ಯವಾಗಿಯೂ, ಕೂಡಿಲ್–ಹೇಳಿದ ಕಡೆ, ಶೊಲ್ಲಾಲ್–ಮಾತಿನಿಂದ, ಕೂರುಮ್–ಹೇಳಲು, ಪದಮ್–ಶಕ್ಯವು, ಅನ್ರು– ಅಲ್ಲ.

ಓ ರಾಮಾನುಜರೇ ! ನಿಮ್ಮ ಪಾದಾರವಿಂದಗಳೇ ಪ್ರಾಪ್ಯ ಪ್ರಾಪಕಗಳೆಂದೂ, ಸಕಲ ಪುರುಷಾರ್ಥಗಳನ್ನೀಯಲು ತಮ್ಮ ಶ್ರೀಪಾದಗಳ ಹೊರತು ಬೇರೊಂದಿಲ್ಲ ಎಂಬ ದೃಢವಾದ ಭಕ್ತಿವಿಶ್ವಾಸವುಳ್ಳ ಜ್ಞಾನಿಗಳಿಗೂ; ಅಂತಹ ಜ್ಞಾನವಿಲ್ಲದ ನನಗೂ

ಒಂದೇ ವಿಧವಾಗಿ ಕೃಪೆ ಮಾಡುತ್ತಿರುವಿರಿ , ಇಂತಹ ಮಹಾತ್ಮರ ಸರ್ವಭೂತ ಸಮ ಸ್ವಭಾವವನ್ನು ವಿವರಿಸಲು ನನ್ನಲ್ಲಿ ಮಾತುಗಳು ಸಾಲವಾಗಿವೆ.

**ಕೂರುಮರ್ ಶಮಯಂಗಳಾರುಂಗುಲೈಯ , ಕ್ಕುವಲಯತ್ತೇ**
**ಮಾರನ್ ಪಣಿತ್ತಮರೈಯುಣರ್ನ್ದೋನೈ , ಮದಿಯಿಲಿಯೇನ್**
**ತೇರುಂಬಡಿಯೆನ್ ಮನಂಬುಗುನ್ದಾನೈತ್ತಿಶೈಯನೈತ್ತು**
**ಮೇರುಂಗುಣನೈ , ಯಿರಾಮಾನುಶನೈಯಿರೈಂಗಿನಮೇ. 46**

ಕೂರುಮರ್–(ಅಕ್ರಮವಾಗಿ) ವಾದಿಸುವಂತಹ, ಶಮಯಂಗಳ್–ಬಾಹ್ಯ ಕುದೃಷ್ಟಿ ಮತಗಳು (ವಾದಿಗಳು), ಆರುಮರ್–ಅವರುಗಳ, ಕುಲೈಯ–ಸ್ವರೂಪ ನಾಶವಾಗುವಂತೆ, ಕುವಲಯತ್ತೇ–ಭೂ ಮಂಡಲದಲ್ಲಿ, ಮಾರನ್–ನಮ್ಮಾಳ್ವಾರರು, ಪಣಿತ್ತ–ಕರುಣಿಸಿದ, ಮರೈ–ದ್ರಾವಿಡ ವೇದಗಳನ್ನು, ಉಣರ್ನ್ದೋನೈ–ಬಲ್ಲವ ರನ್ನೂ, ಮದಿಯಿಲಿಯೇನ್–ಜ್ಞಾನವೇ ಇಲ್ಲದ ನನ್ನನ್ನೂ, ತೇರುಂಬಡಿ–(ನಿಮ್ಮ ಪಾದಾರವಿಂದಗಳೇ ಪ್ರಾಪ್ಯ ಪಾಪಕಗಳೆಂದು) ನಂಬಿ ಉದ್ಧಾರವಾಗುವಂತೆ, ಎನ್ ಮನಮ್–ನನ್ನ ಹೃದಯದಲ್ಲಿ, ಪುಗುನ್ದಾನೈ–ಪ್ರವೇಶಿಸಿದವರು, ತಿಶೈಯನೈ ತ್ತುಮ್–ಸಕಲ ದಿಕ್ಕುಗಳಲ್ಲಿಯೂ, ಏರುಮ್–ತುಂಬಿರುವ, ಕುಣನೈ–ದಿವ್ಯಗುಣ ಗಳನ್ನುಳ್ಳ, ಇರಾಮಾನುಶನೈ–ಯಾವ ರಾಮಾನುಜಾಚಾರ್ಯರಲ್ಲಿ, ಇರೈಂಗಿನಮ್– ಶರಣಾಗತಿ ಮಾಡಿದೆವು.

ವೇದಗಳು ತಿಳಿಸುವ ವಾಸ್ತವಾರ್ಥಗಳನ್ನು ಬಿಟ್ಟು ವಿರುದ್ಧಾರ್ಥಗಳನ್ನು ಕಲ್ಪಿಸಿ, ಶಬ್ದಾಡಂಬರಗಳನ್ನು ಸಾರವಾಗಿಸಿಕೊಂಡ ಕುಮತಸ್ಥರ ಸ್ವರೂಪವನ್ನೇ ನಾಶಮಾಡಿದ ಪ್ರಪನ್ನ ಜನ ಕೂಟಸ್ಥರಾದ ನಮ್ಮಾಳ್ವಾರ್ ಅವರು ಕರುಣಿಸಿರುವ ಯಾವ ದಿವ್ಯ ಪ್ರಬಂಧಗಳ ಶಬ್ದರಸ, ಅರ್ಥರಸ, ಭಾವರಸಗಳೆಲ್ಲವನ್ನೂ ಸಂಪೂರ್ಣ ವಾಗಿ ಅರಿತ ಯಶೋವಂತರಾದ ಸಕಲ ಕಲ್ಯಾಣಗುಣಾತ್ಮಕರಾದ, ನನಗೆ ಕೃಪೆ ಯಿಂದ ಜ್ಞಾನ ನೇತ್ರವನ್ನು ಕರುಣಿಸಿದವರಾದ ರಾಮಾನುಜರನ್ನೇ ಸಕಲವಿಧ ರಕ್ಷಕರೆಂದು ಪ್ರಪತ್ತಿ ಮಾಡುತ್ತಿರುವೆನು.

**ಇರೈಂಗಿಪ್ಪಡುಮ್ ಪರನೀಶನರಂಗನೆನ್ರು , ಇವ್ವುಲಗ**
**ತ್ತಿರಮ್ ಶೆಪ್ಪುಮಣ್ಣಲಿರಾಮಾನುಶನ್ , ಎನ್ನರುವಿನೈಯಿನ್**
**ತಿರಮ್ ಶೆತ್ತಿರವುಮ್ ಪಗಲುಮ್ ವಿಡಾದೆನ್ರನ್ ಶಿನ್ದೈಯುಳ್ಳೇ**
**ನಿರೈಂದೊಪ್ಪರವಿರುನ್ದಾನ್, ಎನಕ್ಕಾರುಮ್ ನಿಗರಿಲ್ಲೈಯೇ. 47**

ಇರ್ಪ್ಪೆಂಗಿ–ಎಲ್ಲರಿಂದಲೂ ಆಶ್ರಯಿಸಲ್ಪಡತಕ್ಕವನೂ, ಪಡುವಮ್–ವೇದಾಂತ ಪ್ರಸಿದ್ಧನಾದ, ಪರನ್–ಸರ್ವ ಪದಾರ್ಥಗಳಿಗಿಂತಲೂ ಶ್ರೇಷ್ಠನಾದ, ಈಶನ್–ಸರ್ವೇಶ್ವರನೂ, ಅರಂಗನ್ ಎನ್ರು–ಶ್ರೀರಂಗನಾಥನೇ ಎಂದು, ಇವ್ವುಲಗತ್ತು–ಈ ಜಗತ್ತಿನಲ್ಲಿ, ಅರಮ್–ಧರ್ಮವನ್ನು, ಶೆಪ್ಪುಮ್–ಪ್ರಸಾದಿಸಿದ, ಅಣ್ಣಲ್–ಸ್ವಾಮಿಯಾದ, ಇರಾಮಾನುಶನ್–ರಾಮಾನುಜರು, ಎನ್–ನನ್ನ ಯಾವ, ಅದು–ನನ್ನನ್ನು ಹಾಳುಮಾಡಲು ಶಕ್ಯವಾಗಿದ್ದ, ವಿನೈಯಿನ್–ಕರ್ಮಗಳ, ತಿರಮ್–ಸಮೂಹವನ್ನು, ಶೆತ್ತು–ನಿರ್ಮೂಲ ಮಾಡಿ, ಇರವುಮ್ ಪಗಲುಮ್–ಅಹೋರಾತ್ರಿ, ವಿಡಾದು–ಬಿಡದೆ, ಎನ್ದನ್–ನನ್ನ ಯಾವ, ಶಿನ್ದೈಯುಳ್ಳೇ–ಹೃದಯದಲ್ಲಿ, ನಿರ್ಪ್ಪೆನ್ನು–ತುಂಬಿಕೊಂಡು, ಒಪ್ಪುಅರ–ಸರಿಸಾಟಿಯಿಲ್ಲದೆ, ಇರುನ್ದಾನ್–ನೆಲೆಸಿರುವರು, ಎನಕ್ಕು–ನನಗೆ, ಆರುಮ್–ಯಾರೂ, ನಿಗರ್ ಇಲ್ಲೈ–ಸಮಾನರು ಇಲ್ಲವು.

ಸರ್ವಸಮಾಶ್ರಯಣೀಯನೆಂದು ವೇದಗಳಲ್ಲಿ ಪ್ರತಿಪಾದಿಸಲ್ಪಟ್ಟ, ಸರ್ವೇಶ್ವರನು, ಉಭಯ ಕಾವೇರಿ ಮಧ್ಯದಲ್ಲಿ ನೆಲೆಸಿರುವ ಶ್ರೀರಂಗನಾಥನೇ ಎಂಬ ತತ್ತ್ವವನ್ನು ಲೋಕಕ್ಕೆಲ್ಲಾ ತಿಳಿಸಿದ, ಮಹೋಪಕಾರಿಗಳಾದ, ಶ್ರೀಮದ್ರಾಮಾನುಜರು, ನನ್ನ ಯಾವ ಎಷ್ಟು ಕಾಲಗಳಲ್ಲಿಯೂ ಸವೆಸಲಾಗದಂತಹ, ಪಾಪ ಸಮೂಹವನ್ನು ನಿರ್ಮೂಲಗೊಳಿಸಿ ನನ್ನ ಹೃದಯ ಮಂದಿರದಲ್ಲಿ ಸ್ಥಿರವಾಗಿರುವರು, ಅದರಿಂದ ನನಗೆ ಸಮಾನರು ಯಾರೂ ಇಲ್ಲ.

**ನಿಗರಿನ್ರಿ ನಿನ್ರವೆನ್ ನೀಶದ್ತೈಕ್ಕು, ನಿನ್ನರುಳಿನ್ಗಣನ್ರಿ**
**ಪ್ಪುಗಲೊನ್ರುಮಿಲ್ಲೈಯರುಟ್ಕುಮಃ ದೇಪುಗಲ್,**
**ಪುನ್ಮೈಯಿಲೋರ್**
**ಪಗರುಮ್ ಪೆರುಮೈಯಿರಾಮಾನುಶ ವಿನಿನಾಮ್ ಪಳುದೇ**
**ಅಗಲುಮ್ ಪೊರುಳೆನ್, ಪಯನಿರುವೋ**
**ಮುಕ್ಕುಮಾನಪಿನ್ನೇ. 48**

ನಿಗರ್ಇನ್ರಿ–(ಸದ್ಗುಣಗಳು ಇಲ್ಲದಾಗ) ಉಪಮಾನವೇ ಇಲ್ಲದೆ, ನಿನ್ರ–ಇರುವ, ಎನ್–ನನ್ನ ಯಾವ, ನೀಶತ್ತೈಕು–ನೀಚ ಸ್ವಭಾವಗಳಿಗೆ, ನಿನ್–(ಅಂತಹ ನೀಚ ಸ್ವಭಾವವನ್ನು ನೋಡದಲೇ ಅಂಗೀಕರಿಸಿದ) ನಿಮ್ಮ ಯಾವ, ಅರುಳಿನ್ಗಣ್–ಕೃಪೆಯಿಂದು, ಅನ್ರಿ–ಪ್ರವೇಶಿಸುವುದಕ್ಕೆ ಮೊದಲು, ಪುಗರ್–ಒದಗಿದ ಸ್ಥಳವು, ಒನ್ರುಮಿಲ್ಲೈ–ಒಂದೂ ಇಲ್ಲವು, ಅರುಟ್ಕುಮ್–ನಿಮ್ಮ ಕೃಪೆಗೂ, ಅಃದೇ–ಹೆಚ್ಚಿನ ನೀಚರೇ, ಪುಗಲ್–ಪಾತ್ರರೂ, ಪುನ್ಮೈಯಿಲೋರ್–ದೋಷವಿಲ್ಲದವರೂ,

ಪಗರುಮ್–ಹೇಳುತ್ತಿರುವ, ಪೆರುಮೈ–ಮಹಿಮೆಯುಳ್ಳ, ಇರಾಮಾನುಶಾ–ರಾಮಾನುಜರೇ !, ಇರುವೋಮುಕ್ಕ–ನಮ್ಮಿಬ್ಬರಿಗೂ, ಪಯನಾನಪಿನ್–(ಹಿಂದೆ ಹೇಳಿದ ಎರಡೂ) ಪ್ರಯೋಜನವಾಗುವಲ್ಲಿ, ನಾಮ್–ಇದನ್ನೆಲ್ಲಾ ಅರಿತ ನಾವು, ಇನಿ–ಇನ್ನು ಮೇಲೆ, ಪಳುದೇ–ವ್ಯರ್ಥವಾಗಿ, ಅಗಲುಮ್–ಕಾಲಕಳೆಯಲು, ಪೊರುಳ್–ಕಾರಣವು, ಎನ್–ಏನಿದೆ.

ದೋಷಗಳೇ ಇಲ್ಲದವರಿಂದಲೂ ಸ್ತುತಿಸಲ್ಪಡುತ್ತಿರುವ, ಓ ರಾಮಾನುಜ ಮುನಿ ! ಸರಿಸಮನಾಗದೇ ಇರುವಂತಹ ನೀಚನಾದ ನನ್ನನ್ನು ಅಂಗೀಕರಿಸಲು ತಮ್ಮ ಕೃಪೆಯೊಂದಲ್ಲದೆ ಬೇರೆ ಸಾಧನವೇ ಇಲ್ಲ. ಸಮಾಜದಲ್ಲಿ ತಮ್ಮ ಕೃಪೆಯಿಂದ ದೋಷವಂತರು ಪ್ರಪನ್ನರಾಗಿದ್ದಾರೆ. ಅದರಿಂದ ನಾವು ತೊಂದರೆಪಟ್ಟುಕೊಳ್ಳಲು ಕಾರಣವೇ ಇಲ್ಲ.

**ಆನದು ಶೆಮ್ಮೈಯರನೆರಿಪೊಯ್ಮೈ, ಯರುಶಮಯಮ್**
**ಪೋನದು ಪೊನ್ರಿಯಿರುನ್ದದು ವೆಂಗಲಿ, ಪೊಂಗುಮಲ**
**ತ್ತೇನದಿಪಾಯ್ ವಯಲ್ ತೆನ್ನರಂಗನ್ ಕಳಚ್ಚೆನ್ನಿವೈತ್ತು**
**ತ್ತಾನದಿಲ್ ಮನ್ನುಮ್, ಇರಾಮಾನುಶನಿತ್ತಲತ್ತುದಿತ್ತೇ.** 49

ಪೂ–ರಮ್ಯವಾದ, ಕಮಲಮ್–ತಾವರೆ ಪುಷ್ಪಗಳಿಂದ ದೊರೆತ, ತೇನ್–ಮಧು ಉಳ್ಳ (ಜೇನುತುಪ್ಪವುಳ್ಳ), ನದಿ–ನದಿಗಳು, ಪಾಯ್–ವೃದ್ಧಿಹೊಂದುತ್ತಾ ಪ್ರವಹಿಸುತ್ತಿರುವ, ವಯಲ್–ಹೊಲಗದ್ದೆಗಳುಳ್ಳ, ತೆನ್–ರಮ್ಯವಾದ, ಅರಂಗನ್–ಉಭಯ ಕಾವೇರಿ ಮಧ್ಯದಲ್ಲಿ ಪವಡಿಸಿರುವ ಶ್ರೀರಂಗನಾಥಸ್ವಾಮಿಯ, ಕಳಲ್–ಶ್ರೀಪಾದಗಳನ್ನು, ಶೆನ್ನಿ–ಶಿರಸ್ಸಿನಲ್ಲಿ, ವೈತ್ತು–ಧರಿಸಿಕೊಂಡು, ತಾನ್–ತಾವು, ಅದಿಲ್–ಆ ಪಾದಾರವಿಂದಗಳಂದು, ಮನ್ನುಮ್–ಸದಾ ಕೂಡಿರುವ, ಇರಾಮಾನುಶನ್–ರಾಮಾನುಜಾಚಾರ್ಯರು, ಇತ್ತಲತ್ತು–ಈ ಭೂಲೋಕದಲ್ಲಿ, ಉದಿತ್ತು–ಅವತರಿಸಿ, ಶೆಮ್ಮೈ–ಸರಿಯಾದ, ಅರನೆರಿ–ಧರ್ಮಮಾರ್ಗವು, ಆನದು–ಆಗಿದೆ, ಪೊಯ್ಮೈ–ಅಸತ್ಯವಾದ (ವೇದ ಬಾಹಿರವಾದ), ಅರುಶಮಯಮ್– ಆ ಕುಮತಗಳು, ಪೊನ್ರಿ–ನಾಶವಾಗಿ ಹೋದವು, ವೆಮ್–ಅತ್ಯಂತ ಕ್ರೂರವಾದ, ಕಲಿ–ಕಲಿಯುಗ ದೋಷವೂ, ಇರಂದದು–ರೂಪವಿಲ್ಲದೆ ನಾಶವಾಯಿತು.

ಮಕರಂದ ಭರಿತವಾದ ತಾವರೆ ಪುಷ್ಪಗಳಿಂದ ತುಂಬಿದ ಹೊಲಗಳು ಸರೋವರಗಳುಳ್ಳ ರಮ್ಯವಾದ ಉಭಯ ಕಾವೇರಿ ಮಧ್ಯದಲ್ಲಿನ ಶ್ರೀರಂಗ ಕ್ಷೇತ್ರದಲ್ಲಿ ಆಶ್ರಿತ ರಕ್ಷಣೆಗೋಸ್ಕರ ಪವಡಿಸಿರುವ ಶ್ರೀರಂಗನಾಥನ ಚರಣಾರವಿಂದಗಳನ್ನು ತಮ್ಮ ಶಿರಸ್ಸಿ

ನಲ್ಲಿ ಧರಿಸಿಕೊಂಡು, ಆ ಶ್ರೀಪಾದಗಳ ಜತೆಯಲ್ಲಿಯೇ ಹೊಂದಿರುವ ದಯಾದ್ರ್ರ ಹೃದಯವನ್ನುಳ್ಳ ಯತಿರಾಜರು, ಈ ಭೂಲೋಕದಲ್ಲಿ ಅವತರಿಸಿ, ಚಾರ್ವಾಕ ಮತ ಗಳನ್ನು ನಿರ್ಮೂಲಗೊಳಿಸಿ, ವೇದ ಪ್ರತಿಷ್ಠಾಪನೆ ಮಾಡಿದರು. ವೇದ ಬಾಹಿರ ಮತಗಳು ನಿರ್ನಾಮವಾಗಿ ಕಲಿದೋಷವು ನಶಿಸಿತು.

**ಉದಿಪ್ಪನವುತ್ತಮರ್ ಶಿನ್ದೈಯುಳ್, ಒನ್ನಲರ್ ನೆಂಗಿ ಮಂಗಿ**
**ಕ್ಕೊದಿತ್ತಿಡ ಮಾರಿನಡಪ್ಪನ, ಕ್ಕೊಳ್ಳೈವನ್ ಕುತ್ತಮೆಲ್ಲಾಮ್**
**ಪದಿತ್ತವೆನ್‌ಪುನ್ ಕವಿಪಾವಿನಮ್ ಪೂಣ್ಡನ ಪಾವುತೊಲ್ ಶೀರ್**
**ಎದಿತ್ತಲೈನಾದನ್, ಇರಾಮಾನುಶನ್ರನ್ನಿಣೈಯಡಿಯೇ.** 50

ಪಾವು–ಎಲ್ಲ ದಿಕ್ಕುಗಳಲ್ಲಿಯೂ ತುಂಬಿರುವಂತಾ, ತೊಲ್–ಉತ್ತಮವಾದ, ಶೀರ್–ಕಲ್ಯಾಣಗುಣಗಳನ್ನು ಹೊಂದಿದ, ಯತಿ–ಸನ್ಯಾಸಿಗಳಿಗೆ, ತಲೈನಾದನ್– ಪ್ರಧಾನ ಸಾಧುವೆನಿಸಿದ (ಯತಿರಾಜರೆನಿಸಿದ), ಇರಾಮಾನುಶನ್ ತನ್–ರಾಮಾನು ಜರ ಯಾವ, ಇಣೈ–ಸುಂದರ ತಮವಾದ, ಅಡಿ–ಶ್ರೀಪಾದಗಳು, ಉತ್ತಮರ್– ಶ್ಲಾಘ್ಯವಾದ ಭಕ್ತರ, ಶಿನ್ದೈಯುಳ್–ಹೃದಯಗಳಲ್ಲಿ, ಉದಿಪ್ಪನ–ಸೂರ್ಯೋದಯ ದಲ್ಲಿ ಪ್ರಕಾಶಿಸುವಂತಹ ಸ್ವಭಾವವನ್ನುಳ್ಳ, ಒನ್ನಲರ್–ಬಾಹ್ಯ ಕುದೃಷ್ಟಿಯ ವಿರೋಧಿಗಳ, ನೆಂಗಿಮ್–ಮನಸ್ಸು, ಅಂಗಿ–ಭಯಪಟ್ಟು, ಕೊದಿತ್ತಿಡ–ಪರಿತಪಿಸಿ, ಮಾರಿ–ಬೇರೆಯ, ನಡಪ್ಪನ–ನಡೆಯುವಂತೆ ಸ್ವಭಾವವನ್ನು, ಕೊಳ್ಳೈ–ತುಂಬಿರುವ, ವನ್–ಬಲಿಷ್ಠವಾದ, ಕುತ್ತಮೆಲ್ಲಾಮ್–ದೋಷಗಳೆಲ್ಲವನ್ನೂ, ಪದಿತ್ತ–ನಿವಾರಿಸಿ ಸ್ಥಾಪಿಸಿದ, ಎನ್–ನನ್ನ ಯಾವ, ಪುನ್–ನೀಚವಾದ, ಕವಿ–ಕವಿತ್ವಗಳು (ಕವನ ಗಳು), ಪಾಯಿನಮ್–ನಿಮ್ಮಯ ಶ್ರೀಪಾದಗಳನ್ನು, ಪೂಂಡನ–ಅಲಂಕರಿಸಿಕೊಂಡಿವೆ.

ಸನ್ಯಾಸಾಶ್ರಮಕ್ಕೆ ಅವಶ್ಯಕವಾದ ದಿವ್ಯಗುಣಗಳನ್ನುಳ್ಳ ಯತಿಗಳಿಗೆ ನಾಥನಾದ ಶ್ರೀಮದ್ರಾಮಾನುಜರ ರಮ್ಯವಾದ ಶ್ರೀ ಪಾದಾರವಿಂದಗಳನ್ನು, ಸಾಧನಾಂತರ, ಪ್ರಯೋಜನಾಂತರಪರರಾದ ಉತ್ತಮರು ತಮ್ಮ ಹೃದಯದಲ್ಲಿ ಯಾವಾಗಲೂ, ಧ್ಯಾನಿಸುತ್ತಾ ತುಂಬಿಕೊಂಡಿರುವರು. ಇಂತಹ ಧ್ಯಾನ ಮಾಡಲಶಕ್ಯನಾದ, ಚಪಲತ್ವವನ್ನು ಹೊಂದಿರುವಂತಹ, ದೋಷ ಸಮೂಹಗಳಿಂದಾವೃತವಾದ, ನನ್ನ ಯಾವ ನೀಚ ಕವನಗಳಿಂದ ಪಾಡುವ ನನ್ನ ಮಾತುಗಳನ್ನು ಅಂಗೀಕರಿಸಿ, ಅಲಂಕರಿಸಿ ಕೊಂಡಿರುವಂತಹ ಉಡೈಯವರ ವೈಭವವನ್ನು ಹೇಳಿದ್ದಾರೆ.

**ಅಡಿಯೈತ್ತೊಡರ್ನ್ದೆಳುಮೈವರ್ ಗಟ್ಕಾಯ್,**
**ಅನ್ರುಪಾರದಪ್ಪೋರ್**
**ಮುಡಿಯಪ್ಪರಿನೆಡುಮ್ ತೇರ್‌ವಿಡುಮ್ ಕೋನ್ಯೈ,**
**ಮುಳುದುಣರ್ನ್ದ**
**ವಡಿಯರ್ಕ್ಕಮುದವಿರಾಮಾನುಶನೆನ್ನೈಯಾಳವನ್ದು**
**ಯಿಪ್ಪಡಿಯಿರ್ಪಿರನ್ದದು, ಮತ್ತಿಲ್ಲೈ**
**ಕಾರಣಮ್ ಪಾರ್ತಿಡಿಲೇ.** 51

ಅಡಿ–ಶ್ರೀಪಾದಗಳನ್ನು, ತೊಡರ್ನ್ದು–ಆಧಾರವಾಗಿ ಅನುಸರಿಸಿ, ಎಳುಮ್–ವೃದ್ಧಿ ಹೊಂದುತ್ತಿರುವ, ಐವರ್‌ಗಟ್‌ಕಾಯ್–ಪಂಚಪಾಂಡವರಿಗಾಗಿ, ಅನ್ರು–(ತನ್ನನ್ನೇ ನಂಬಿದಂತಾ) ತನ್ನನ್ನುಳಿದು ಬೇರೆ ರಕ್ಷಕರನ್ನರಿಯದೆ, ಪಾರದಪ್ಪೋರ್–ಮಹಾಭಾರತ ಯುದ್ಧದಲ್ಲಿ, ಮುಡಿಯ–ಅವರ ಶತ್ರುಗಳು ನಾಶವಾಗುವಂತೆ, ಪರಿ–(ಸಾರಥ್ಯವನ್ನು ವಹಿಸಿ) ರೀತಿ, ನೆಡುಮ್–ನೀಳವಾದ, ತೇರ್–ರಥವನ್ನು, ವಿಡುಮ್–ನಡೆಸಿದ, ಕೋನ್ಯೈ–ಸರ್ವೇಶ್ವರನಾದ ಕೃಷ್ಣನ, ಮುಳುದು–ಸ್ವಭಾವವೆಲ್ಲವನ್ನೂ, ಉಣರ್ನ್ದ–ತಿಳಿದುಕೊಂಡ; ಅಡಿಯಾರ್ಕ್ಕು–ಕಿಂಕರರಿಗೆ, ಅಮುದನ್–ಅಮೃತದಂತೆ ಭೋಗ್ಯಭೂತರಾದ, ಇರಾಮಾನುಶನ್–ಶ್ರೀಮದ್ರಾಮಾನುಜಾಚಾರ್ಯರು, ಇಪ್ಪಡಿಯಿಲ್–ಭೂಲೋಕದಲ್ಲಿ, ವನ್ದುಪಿರನ್ದು–ಬಂದು ಅವತರಿಸಿದ್ದು, ಎನ್ನೈ–ನನ್ನನ್ನು, ಆಳ–ಉದ್ಧರಿಸುವುದಕ್ಕಾಗಿಯೇ, ಪಾರ್ತ್ತಿಡಿಲ್–ವಿಚಾರಿಸಿದಾಗ, ಮತ್ತು–ಬೇರೆ, ಕಾರಣಮ್–ಕಾರಣವು, ಇಲ್ಲೈ–ಇಲ್ಲವು.

ಬಾಲ್ಯದಿಂದಲೂ, ಸರ್ವರಕ್ಷಕನೇ ಎಂದು ತಿಳಿದ ಪಂಚಪಾಂಡವರನ್ನು ರಕ್ಷಿಸುವ ನಿಮಿತ್ತವೇ ಸಾರಥ್ಯವನ್ನು ಮಾಡಿ ಶತ್ರುಪಕ್ಷವನ್ನು ನಾಶಮಾಡಿದ ಶ್ರೀಕೃಷ್ಣನ ಅತಿಮಾನುಷ ಚೇಷ್ಟಿತಗಳನ್ನು ಅರಿತ, ಸ್ವರೂಪಜ್ಞಾನವನ್ನು ಪಡೆದಿರುವ ಶ್ರೀವೈಷ್ಣವರಿಗೆ ಅಮೃತದಂತಿರುವ ರಾಮಾನುಜರು ಈ ಲೋಕದಲ್ಲಿ ಅವತರಿಸಿದ ಕಾರಣವನ್ನು ಆಲೋಚಿಸಿದರೆ, ಅದು ನನ್ನನ್ನು ರಕ್ಷಿಸುವುದಕ್ಕೆ ಮಾತ್ರವಲ್ಲದೆ ಬೇರೆ ಇಲ್ಲ.

**ಪಾತ್ತಾನರುಶಮಯಂಗಳ್ ಪದೈಪ್ಪ, ವಿಪ್ಪಾರ್ ಮುಳುದುಮ್**
**ಪೊರ್ತ್ತಾನ್ ಪುಗಳ್‌ಕೊಂಡು ಪುನ್ಮೈಯಿನೇ**
**ನಿಡುತ್ತಾನ್ ಪುಗುನ್ದು,**
**ತೀರ್ತ್ತಾನಿರುವಿನೈತೀರ್ತರಂಗನ್ ಶೆಯ್ಯ ತಾಳಿಣೈಯೊ**
**ಡಾತ್ತಾನ್, ಇವೈಯೆಮ್ಮಿರಾಮಾನುಶನ್**
**ಶೆಯ್ಯುಮರ್ಪುದಮೇ.** 52

ಅರುಶಮಯಂಗಳ್—ವೇದಬಾಹಿರವಾದ ಷಣ್ಮತಗಳನ್ನು, ಪಟ್ಟೈಪ್ಪ—ನಿರ್ಮೂಲ ವಾಗುವಂತೆ, ಪಾರ್ತ್ತಾನ್—ಕಟಾಕ್ಷಿಸಿದರು, ಇಪ್ಪಾರ್ಮುಳುದುಮ್—ಈ ಭೂಮಿ ಯೆಲ್ಲವನ್ನೂ, ಪುಗಳ್ಕೊಂಡು—(ತಮ್ಮ ದಿವ್ಯ ಕೀರ್ತಿಯನ್ನು) ಹಾಡಿಹೊಗಳುವಂತೆ, ಪೋರ್ತ್ತಾನ್—ವ್ಯಾಪಿಸುವಂತೆ ಮಾಡಿದರು, ಪುನ್ಮೈಯಿನೇನಿಡೈ—ನೀಚಗುಣ ಗಳನ್ನು ತುಂಬಿದ ನನ್ನಲ್ಲಿ, ತಾನ್—ತಾನೇ ಸ್ವತಃ, ಪುಗುನ್ದು—ಪ್ರವೇಶಿಸಿ, ಇರು—ವಿಸ್ತಾರವಾದ, ವಿನ್ನೈ—ಪಾಪಗಳನ್ನು, ತೀರ್ತ್ತಾನ್—ನಾಶಮಾಡಿದರು, ಅರಂಗನ್—ಶ್ರೀರಂಗನಾಥನ, ಶೆಯ್ಯ—ರಮ್ಯವಾದ, ತಾಳಿಣೈಯೊಡು—ಪಾದಾರವಿಂದಗಳ ಜತೆ ಯಲ್ಲಿ, ಆರ್ತ್ತಾನ್—ಸಂಬಂಧವನ್ನು ಕಲ್ಪಿಸಿದರು, ಎಮ್—ನಮಗೆ ನಾಥರಾದ, ಇರಾಮಾನುಶನ್—ರಾಮಾನುಜಾಚಾರ್ಯರು, ಶೆಯ್ಯುಮ್—ಮಾಡಿದ, ಅದ್ಭುತಮ್—ಆಶ್ಚರ್ಯಗಳು, ಇಪ್ಪೈ—ಇವುಗಳು.

ವೇದಬಾಹಿರವಾದ ಬಾಹ್ಯ ಮತಗಳು ಬೆಳೆದಾಗ ಅವುಗಳನ್ನು ನಾಶಮಾಡಿ ಲೋಕದಲ್ಲೆಲ್ಲಾ ಕೀರ್ತಿ ಹೊಂದಿ, ನಿರ್ಹೇತುಕ ಕೃಪೆಯಿಂದ, ತಾವೇ ದಯದಿಂದ ನನ್ನನ್ನು ಪ್ರವೇಶಿಸಿ, ನೀಚನಾದ ನನ್ನನ್ನು ಕಟಾಕ್ಷಿಸಿ, ನನ್ನ ಮಹಾಪಾಪಗಳನ್ನೆಲ್ಲಾ ಧ್ವಂಸಮಾಡಿ ಶ್ರೀರಂಗನಾಥನ ಪಾದಾರವಿಂದಗಳಿಗೆ ಅರ್ಹನಾಗುವಂತೆ ಮಾಡಿದ, ನಮಗೆ ನಾಥರಾದ ಶ್ರೀಮದ್ರಾಮಾನುಜಾಚಾರ್ಯರದು ಇಂತಹ ಅತ್ಯಾಶ್ಚರ್ಯಕರವಾದ ಕಾರ್ಯಗಳನ್ನು ಮಾಡುವ ಸ್ವಭಾವ ಧರ್ಮವಾಗಿರುವುದು ಎನ್ನುತ್ತಾರೆ.

**ಅರ್ಪುದನ್ ಶೆಮ್ಮೈಯಿರಾಮಾನುಶನ್, ಎನ್ನೈ ಆಳವನ್ದ**
**ಕರ್ಪಗಮ್ ಕತ್ತವರ್ ಕಾಮುರುಶೀಲನ್, ಕರುದರಿಯ**
**ಪರ್ಪಲ್ಲುಯಿರ್ಗಳುಮ್ ಪಲ್ಲುಲಗಿಯಾವುಮ್ ಪರನದೆನ್ನುಮ್**
**ನರ್ಪೊರುಳ್‌ದನ್ನೈ, ಯಿನ್ನಾನಿಲತ್ತೇವನ್ದು ನಾಟ್ಟಿನನೇ.** 53

ಎನ್ನೈ—ನನ್ನನ್ನು, ಆಳ—ಕಾಪಾಡುವುದಕ್ಕಾಗಿ, ವನ್ದ—ಬಂದ, ಕರ್ಪಗಂ—ಪರಮೋದಾರಿಗಳಾದ, ಕತ್ತವರ್—ಜ್ಞಾನವಂತರೂ, ಕಾಮುದು—ಇಚ್ಛಿಸುವಂತಹ, ಶೀಲನ್—ಸೌಶೀಲ್ಯಗುಣ ಉಳ್ಳವರೂ, ಅರ್ಪುದಮ್—ಆಶ್ಚರ್ಯವಂತರೂ, ಶೆಮ್ಮೈ—(ಕಪಟ ಜನರನ್ನೂ ಕೂಡ) ಸನ್ಮಾರ್ಗಕ್ಕೆ ತರುವಂತಹವರೂ ಆದ, ಇರಾಮಾನುಶನ್—ರಾಮಾನುಜಾಚಾರ್ಯರು, ಕರುದು—ಎಣಿಸಲು, ಅರಿಯ—ಶಕ್ಯವಾಗದಷ್ಟು, ಅರ್ಪಲ್—ಅನೇಕವಾದಂತ, ಉಯಿರ್ಕಳುಮ್—ಜೀವರುಗಳನ್ನೂ, ಪಲ್—ಅನೇಕ ವಾದ, ಉಲಗಿಯಾವುಮ್—ಸಕಲ ಲೋಕಗಳಲ್ಲೂ, ಪರನದು—ಸರ್ವರ ಆತ್ಮನಾಗಿರುವ ಪರಾತ್ಪರನದು, ಎನ್ನುಮ್—ಎಂದು, ನಲ್—ಉತ್ತಮವಾದ, ಪೊರುಳ್‌ತನ್ನೈ—ಅರ್ಥವನ್ನು, ಇ—ಈ ಯಾವ, ನಾನಿಲತ್ತೆ—ಭೂಮಿಯಲ್ಲಿ, ವನ್ದು—ಯಾರ ಕೋರಿಕೆಯೂ ಇಲ್ಲದೆ ಇರುವಾಗ ತಾವೇ ಬಂದು, ನಾಟ್ಟಿನನ್—ಸ್ಥಾಪಿಸಲ್ಪಟ್ಟವ ರಾಗಿದ್ದಾರೆ.

ಉಧಾರ ಸ್ವಭಾವದಿಂದ ನನ್ನನ್ನು ರಕ್ಷಿಸಿದವರಾದ, ವಿದ್ವಾಂಸರೆಲ್ಲರೂ ಇಚ್ಛಿಸುವ ಸೌಶೀಲ್ಯಗುಣವುಳ್ಳವರೂ, ಆಶ್ಚರ್ಯಭೂತರೂ, ಕಪಟಿಗಳನ್ನೂ ಸನ್ಮಾರ್ಗಕ್ಕೆ ಕರೆದೊಯ್ಯುವ, ಶ್ರೀ ರಾಮಾನುಜರು, ಸಕಲ ಜೀವರಾಶಿಗಳಿಗೂ, ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೂ, ಬ್ರಹ್ಮರುದ್ರಾದಿಗಳೆಲ್ಲರಿಗೂ, ಪರನಾದ ಶ್ರೀಮನ್ನಾರಾಯಣನೇ ನಾಯಕನು, (ಸಕಲ ಚರಾಚರಗಳೂ ಅವನಲ್ಲಿಯೇ ಅಡಗಿವೆ) ಎಂಬ ಮುಖ್ಯ ತತ್ವಾರ್ಥವನ್ನು ಈ ಲೋಕದಲ್ಲಿ ಬೋಧಿಸಿ ಸ್ಥಾಪಿಸಿದರು.

**ನಾಟ್ಟಿಯನೀಶಚ್ಚಮಯಂಗಳ್ ಮಾಂಡನ, ನಾರಣನೈ**
**ಕ್ಕಾಟ್ಟಿಯ ವೇದಮ್ ಕಳಿಪುತ್ತದು, ತೆನ್ಗುರುಗೈವಳ್ಳಲ್**
**ವಾಟ್ಟಮಿಲಾವಣ್ಣಮಿಳ್ ಮರೈವಾಳ್‌ನ್ದದು ಮಣ್ಣುಲಗಿಲ್**
**ಈಟ್ಟಿಯಶೀಲತ್ತು, ಇರಾಮಾನುಶನ್ರನ್ನಿಯಲ್ವುಕಂಡೇ.** 54

ಮಣ್ಣುಲಗಿಲ್–ಈ ಭೂಲೋಕದಲ್ಲಿ, ಈಟ್ಟಿಯ ಶೀಲತ್ತು–ಕುಂದದ ಸೌಶೀಲ್ಯ ಗುಣಗಳುಳ್ಳ, ಇರಾಮಾನುಶನ್ ತನ್–ರಾಮಾನುಜರು ತಮ್ಮ, ಇಯಲ್ವು–ಸ್ವಭಾವವನ್ನು, ಕಂಡು–ನೋಡಿ, ನಾಟ್ಟಿಯ–(ಅಯುಕ್ತರೊಡನೆ ಯುಕ್ತಿಯಿಂದ) ಸ್ಥಾಪಿತವಾದ, ನೀಶಮ್–ತುಚ್ಛವಾದ, ಶಮಯಂಗಳ್–ಮತಗಳನ್ನು, ಮಾಂಡನ–ನಶಿಸುವಂತೆ ಮಾಡಿ, ನಾರಣನೈ–ಶ್ರಿಯಃಪತಿಯನ್ನು, ಕಾಟ್ಟಿಯ–ಪ್ರತಿಪಾದಿಸಿ ಪ್ರಕಾಶಿಸುವಂತೆ ಮಾಡಿದ, ವೇದಮ್–ವೇದಗಳು, ಕಳಿಪ್ಪುಉತ್ತದು–(ನಮಗೆ ಇನ್ನು ಕೊರತೆ ಇಲ್ಲವೆಂದು) ಗರ್ವಪಟ್ಟವು, ತೆನ್–ಸರ್ವವಿಧ ಲಕ್ಷಣವಾದ, ಕುರುಗೈ–ತಿರುನಗರಿಯನ್ನು ನಿತ್ಯವಾಸವಾಗಿ ಉಳ್ಳ, ವಳ್ಳಲ್–ಪರಮ ಉದಾರಿಗಳಾದ ನಮ್ಮಾಳ್ವಾರರು ಅಣತಿಯಿತ್ತಿರುವ, ವಾಟ್ಟಮ್ ಇಲಾ–ಯಾವ ಕೊರತೆಯೂ ಇಲ್ಲದೆ ಇರುವ, ವಣ್–ಉದಾರ ಸ್ವಭಾವವುಳ್ಳ, ತಮಿಳ್‌ಮರೈ–ದ್ರಾವಿಡ ವೇದಗಳೆಂದು ಹೆಸರಾದ ದಿವ್ಯಪ್ರಬಂಧಗಳು, ವಾಳ್‌ನ್ದದು–ವೃದ್ಧಿಹೊಂದಿ ಸುಖಿಸಿದವು.

ಲೋಕವೆಲ್ಲಾ ಹೊಗಳುತ್ತಿರುವ ಪರಿಪೂರ್ಣವಾದ ಸೌಶೀಲ್ಯಗುಣವುಳ್ಳ, ರಾಮಾನುಜಾಚಾರ್ಯರ ಸ್ವಾಭಾವಿಕ ತೇಜಸ್ಸನ್ನು ಕಂಡು, ದುರ್ಮತಗಳೆಲ್ಲವೂ ನಾಶ ಹೊಂದಿದವು. ಸಕಲ ವೇದಗಳೂ ಇನ್ನು ಮೇಲೆ ತಮ್ಮ ಶೃತಿಗಳಿಗೆ ತಪ್ಪು ಅರ್ಥಗಳನ್ನು ಕಲ್ಪಿಸಿ ತಮ್ಮ ಹಿರಿತನವನ್ನು ತೆಗಳುವವರು ಇನ್ನಿಲ್ಲವೆಂದು ನೆಮ್ಮದಿ ಹೊಂದಿ ಸಂತೋಷಪಟ್ಟವು. ನಮ್ಮಾಳ್ವಾರರು ಕರುಣಿಸಿದ ದಿವ್ಯಪ್ರಬಂಧಗಳು ಎಲ್ಲರನ್ನೂ ಉದ್ಧಾರವಾಗುವಂತೆ ಮಾಡಲು ಶಕ್ತವಾದೆವೆಂದು ಸಂತೋಷಪಟ್ಟವು.

ಕಂಡವರ್ ಶಿನ್ದೈಕವರುಮ್, ಕಡಿಪ್ಪೊಳಿಲ್ ತೆನ್ನರಂಗನ್
ಕೊಂಡರ್ ಕುಲಾವುಮ್ ಇರಾಮಾನುಶನ್ನೈ, ತೊಗೈಯಿರನ್ದ
ಪಂಡರುವೇದಂಗಳ್ ಪಾರ್‌ಮೇಲ್ ನಿಲವಿಡಪ್ಪಾರ್ತರುಳುಮ್
ಕೊಂಡಲೈ ಮೇವಿತ್ತೊಳುಮ್, ಕುಡಿಯಾ
ಮೆಂಗಳ್‌ಕೋಕ್ಕುಡಿಯೇ. 55

ತೊಕೈಯಿರನ್ದ–ಲೆಕ್ಕವಿಲ್ಲದೆ ಅನಂತವಾದ, ಪಣಿತರ್–ಸುಸ್ವರದಿಂದ ಪೇಳುವ ಪಂಡಿತರಿಂದ, ವೇದಂಗಳ್–ವೇದಗಳು, ಪಾರ್‌ಮೇಲ್–ಭೂಮಿಯಲ್ಲಿ, ನಿಲವಿಡ–ವ್ಯಾಪಿಸುವಂತೆ, ಪಾರ್ತರುಳುಮ್–ಆಲೋಚಿಸಿ ಕೃಪೆಮಾಡಿದ, ಕೊಂಡಲೈ–ಮೇಘಗಳಂತೆ ಔದಾರ್ಯವುಳ್ಳ, ಕಂಡವರ್–ದರ್ಶನ ಮಾಡಿದವರ ಯಾವ, ಶಿಂದೈ–ಹೃದಯವನ್ನು, ಕವರುಮ್–ವಶಪಡಿಸಿಕೊಳ್ಳುವಂತ, ಕಡಿ–ಪರಿಮಳಯುಕ್ತವಾದ, ಪೊಳಿಲ್–ಹೂದೋಟಗಳುಳ್ಳ, ತೆನ್–ರಮ್ಯವಾದ, ಅರಂಗನ್–ಉಭಯ ಕಾವೇರಿ ಮಧ್ಯದಲ್ಲಿ ಪವಡಿಸಿರುವ ಶ್ರೀರಂಗನಾಥಸ್ವಾಮಿಗೆ, ತೊಂಡರ್–ಭಕ್ತರ, ಕುಲಾವುಮ್–ಒಡನಾಡುತ್ತಿರುವ, ಇರಾಮಾನುಶನ್ನೈ–ರಾಮಾನುಜಾಚಾರ್ಯರನ್ನು, ಮೇವಿ–ಹೋಗಿ, ತೊಳುಮ್–ಆಶ್ರಯಿಸಿರುವ, ಕುಡಿ–ವಂಶವು, ಎಂಗಳ್–ನಮ್ಮನ್ನು, ಕೋ–ಸಂರಕ್ಷಿಸುವಂತಾ, ಕುಡಿಯಾಮ್–ಕುಲವು ಆಗುತ್ತದೆ.

ಲೋಕದಲ್ಲಿ ವೇದಗಳಲ್ಲಿ ಗೌರವ ಬುದ್ಧಿಯು ಕಡಿಮೆಯಾಗಿ ವೇದಮಾರ್ಗವನ್ನು ಬಿಡುತ್ತಿರುವ ಸಮಯದಲ್ಲಿ, ಶ್ರೀರಾಮಾನುಜರು ಅವತರಿಸಿ, ಪ್ರಾಮಾಣಿಕ ಬುದ್ಧಿ ವೃದ್ಧಿಯಾಗುವಂತೆ, ಶ್ರೀಭಾಷ್ಯಾದಿ ಗ್ರಂಥಗಳನ್ನು ರಚಿಸಿ, ಪ್ರತಿಷ್ಠಾಪಿಸಿದ ಔದಾರ್ಯ ಗುಣಗಳುಳ್ಳವರಾಗಿ, ಸಕಲಜನ ಮನೋಹರವಾದ ಪರಿಮಳಭರಿತ ದಿವ್ಯ ಪುಷ್ಪೋದ್ಯಾನಗಳಿಂದ ತುಂಬಿದ, ರಮಣೀಯವಾದ ಶ್ರೀರಂಗ ಕ್ಷೇತ್ರದಲ್ಲಿನ ಸ್ವಾಮಿಯಾದ ಶ್ರೀಮನ್ನಾರಾಯಣನಿಗೆ ದಾಸರಾಗಿರುವ ಮಹಾತ್ಮರ ಸಹವಾಸದಲ್ಲಿರುವ, ಆ ಶ್ರೀಮದ್ರಾಮಾನುಜರನ್ನು ಶ್ರದ್ಧೆಯಿಂದ ಆಶ್ರಯಿಸಿದವರ ಕುಲವೇ ನಮ್ಮನ್ನು ಸಂರಕ್ಷಿಸುವ ಕುಲವಾಗುತ್ತದೆ.

ಕೋಕ್ಕುಲಮನ್ನರೈ ಮೂವೆಳುಗಾಲ್,
ಒರುಕೂರ್ ಮಳುವಾಲ್
ಪೋಕ್ಕಿಯದೇವನ್ನೈಪ್ಪೋತ್ತುಮ್ ಪುನಿದನ್,
ಪುವನಮೆಂಗುಮ್
ಆಕ್ಕಿಯ ಕೀರ್ತಿಯಿರಾಮಾನುಶನ್ನೈಯಡೈನ್ದಪಿನ್
ಎನ್‌ವಾಕ್ಕುರೈಯಾದು, ಎನ್‌ಮನಮ್
ನಿನ್ನೈಯಾದಿನಿಮತ್ತೊನ್ನೈಯೇ. 56

ಕೊಕ್ಕುಲಮ್–ಕ್ಷತ್ರಿಯ ಕುಲದಲ್ಲಿ ಹುಟ್ಟಿದ, ಮನ್ನರ್ೖ–ರಾಜರನ್ನು, ಮೂವೆಳುಗಾಲ್–ಇಪ್ಪತ್ತೊಂದು ಸಾರಿ ಪ್ರದಕ್ಷಿಣೆ ಮಾಡಿ, ಒರು–ಸಾಟಿಯಿಲ್ಲದ, ಕೂರ್–ಹರಿತವಾದ, ಮಳುವಾಲ್–ಗಂಡುಗೊಡಲಿಯಿಂದ, ಪೋಕ್ಕಿಯ–ಸಂಹಾರ ಮಾಡಿದ, ತೇವನ್ೖ–ಸರ್ವೇಶ್ವರನಾದ ಪರಶುರಾಮನನ್ನು, ಪೋತ್ತುಮ್–ಸ್ತೋತ್ರ ಮಾಡುವ, ಪುನಿದನ್–ಪುಣ್ಯಾತ್ಮರನ್ನು, ಪುವನಮೆಂಗುಮ್–ಲೋಕವೆಲ್ಲವನ್ನೂ, ಆಕ್ಕಿಯ–ವ್ಯಾಪಿಸುವಂತೆ ಮಾಡಿದ, ಕೀರ್ತಿ–ಕೀರ್ತಿವಂದರಾದ, ಇರಾಮಾನುಶನ್ೖ–ಶ್ರೀರಾಮಾನುಜರನ್ನು, ಅಡ್ೖನ್ದಪಿನ್–ಆಶ್ರಯಿಸಿದ ಮೇಲೆ, ಇನಿ–ಇನ್ನುಳಿದ ಕಾಲವೆಲ್ಲವೂ, ಮತ್ತುಒನ್ರ್ೖ–ಇತರ ವಿಷಯವೊಂದನ್ನೂ, ಎನ್–ನನ್ನ, ವಾಕ್–ಸ್ತೋತ್ರ, ಉರ್ೖಯಾದ–ಮಾಡುವುದಿಲ್ಲ, ಎನ್‌ಮನಮ್–ನನ್ನ ಹೃದಯವು, ನಿನ್ೖಯಾದು–ಬೇರೊಂದನ್ನು ಸ್ಮರಿಸದು.

ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡಿ ದುಷ್ಟ ಕ್ಷತ್ರಿಯರನ್ನು ಸಂಹಾರ ಮಾಡಿದ ಪರಶುರಾಮಾವತಾರದ ಶ್ರೀಯಃಪತಿಯನ್ನು ಸ್ತೋತ್ರ ಮಾಡುವವರನ್ನು ಪರಮ ಪಾವನರೂ, ಜಗದ್ವಿಖ್ಯಾತವಾದ ಕೀರ್ತಿಯನ್ನುಳ್ಳವರೂ ಆದ ಶ್ರೀಮದ್ರಾಮಾನುಜರನ್ನು ಆಶ್ರಯಿಸಿದ ಮೇಲೆ ನನ್ನ ಸ್ತೋತ್ರವು ಅವರನ್ನುಳಿದು ಬೇರೊಂದನ್ನು ವಲ್ಲದು, ನನ್ನ ಮನಸ್ಸು ಅನ್ಯವಿಷಯಗಳಲ್ಲಿ ಸೇರದು.

**ಮತ್ತೊರುಪೇರು ಮದಿಯಾದು, ಅರಂಗನ್ ಮಲರಡಿಕ್ಕಾಳ್**
**ಉತ್ತವರೇತನಕ್ಕುತ್ತವರಾಯ್‌ಕ್ಕೊಳ್ಳುಮುತ್ತಮನ್ೖ,**
**ನತ್ತವರ್‌ಪೋತ್ತುಮಿರಾಮಾನುಶನ್ೖಯಿನ್ನಾನಿಲತ್ತೇ**
**ಪೆತ್ತನನ್, ಪೆತ್ತಪಿನ್ ಮತ್ತರಿಯೇನೊರುಪೇದ್ೖಮ್ೖಯೇ.** 57

ಒರು–ಬೇರೊಂದು, ಪೇರು–ಪುರುಷಾರ್ಥವನ್ನು, ಮದಿಯಾದು–ಸಾಟಿಯಿಲ್ಲದ, ಅರಂಗನ್–ಶ್ರೀರಂಗನಾಥನ, ಮಲರ್ ಅಡಿಕ್ಕು–ಹೂವಿನಂತಹ ಪಾದಗಳಿಗೆ ಅಳ್–ದಾಸ್ಯವನ್ನು, ಉತ್ತವರೇ–ಹೊಂದಿದವರನ್ನೇ, ತನಕ್ಕು–ತಮಗೆ, ಉತ್ತವರಾಯ್–ತಮಗೆ ಆಪ್ತಬಂಧುಗಳೆಂದು, ಕೊಳ್ಳುಮ್–ಅಂಗೀಕರಿಸಲು, ಉತ್ತಮನ್ೖ–ಶ್ರೇಷ್ಠರಾದ, ನಲ್‌ತವರ್–ಶ್ರೇಷ್ಠವಾದ ತಪಸ್ಸಿನಿಂದ ನಿಷ್ಠರಾದವರೊಡನೆ, ಪೋತ್ತುಮ್–ಸ್ತುತಿಸುತ್ತಿರುವವರಾದ, ಇರಾಮಾನುಶನ್ೖ–ಶ್ರೀಮದ್ರಾಮಾನುಜಾಚಾರ್ಯರನ್ನು, ಇ–ಈ, ನಾನಿಲತ್ತೇ–ಜಗತ್ತಿನಲ್ಲಿ, ಪೆತ್ತನನ್–ಆಶ್ರಯಿಸುವಂತೆ ಲಭ್ಯನಾದೆ, ಪೆತ್ತಪಿನ್–ಇದು ಲಭ್ಯವಾದ ಮೇಲೆ, ಮತ್ತು ಒರು–ಬೇರೊಂದು, ಪೇದ್ೖಮ್ೖ–ಅವಿವೇಕವನ್ನು, ಅರಿಯೇನ್–ತಿಳಿದಿಲ್ಲ.

ಪರಮೈಕಾಂತಿನಿಷ್ಠರಾಗಿ ಶ್ರೀರಂಗನಾಥನ ಪರಮಭೋಗ್ಯವಾದ ಶ್ರೀಪಾದಾರವಿಂದಗಳನ್ನು ಆಶ್ರಯಿಸಿದ ಮಹಾತ್ಮರನ್ನೇ ತಮಗೆ ಸರ್ವವಿಧವಾದ ಬಂಧುಗಳೆಂದು ಗ್ರಹಿಸಿದ ಮಹನೀಯರೂ, ಉತ್ತಮ ತಪಸ್ಸುಗಳಿಂದ ಸ್ತೋತ್ರ ಮಾಡುವಂತಹ, ರಾಮಾನುಜಾಚಾರ್ಯರನ್ನು ಪರಮ ಪ್ರಾಪ್ಯವಾದವರೆಂದು ಆಶ್ರಯಿಸಿದೆ, ಇನ್ನು ಮೇಲೆ ಬೇರೆಯವರನ್ನು ಅಪೇಕ್ಷಿಸುವ ಅವಿವೇಕವನ್ನು ಮಾಡಲಾರೆ.

**ಪೇದೈಯರ್ ವೇದಪ್ಪೊರುಳಿದೆನ್ರುನ್ನಿ, ಪ್ಪಿರಮನನ್ರು**
**ನೋದಿಮತ್ತೆಲ್ಲಾ ವುಯಿರುಮ್ ಅಂದು, ಎನ್ರುಯಿರ್ ಗಳ್**
**ಮೆಯ್ ವಿಟ್ಟು,**
**ಆದಿಪರನೋಡೊನ್ರಾಮೆನ್ರು ಶೊಲ್ಲುಮವ್ವಲ್ಲಲೆಲ್ಲಾಮ್**
**ವಾದಿಲ್ ವೆನ್ರಾನ್, ಎಮ್ಮಿರಾಮಾನುಶನ್ ಮೆಯ್**
**ಮದಿಕ್ಕಡಲೇ.** 58

ಪೇದೈಯರ್–ವೇದಗಳಿಗೆ ಅಪಾರ್ಥ ಕಲ್ಪಿಸುವ ಜ್ಞಾನಶೂನ್ಯರನ್ನು, ವೇದಮ್–ವೇದಗಳಲ್ಲಿನ, ಪೊರುಳ್–ಅರ್ಥವು, ಇದುಎನ್ರು–ಇದೇ ಎಂದು, ಉನ್ನಿ–ನಿಶ್ಚಯಿಸಿ, ಪಿರಮನ್–ಬ್ರಹ್ಮವು, ನನ್ರುಎನ್ರು–ವಿಲಕ್ಷಣವಾದುವೆಂದು, ಓದಿ–ಪ್ರತಿಪಾದಿಸಿ, ಮತ್ತು ಎಲ್ಲಾ ಉಯಿರುಮ್–ಇತರವೆಂಬ ಸಮಸ್ತ ಆತ್ಮರನ್ನು, ಅಂದುಎನ್ರು–ಆ ಬ್ರಹ್ಮವೇ ಎಂದು, ಉಯಿರ್ ಕಳ್–ಆತ್ಮವು, ಮೆಯ್–ದೇಹವನ್ನು, ವಿಟ್ಟು–ಬಿಡುತ್ತಲೇ, ಆದಿ–ಕಾರಣಭೂತನಾದ, ಪರನೋಡು–ಸರ್ವ ಆತ್ಮಕನಾದ ಬ್ರಹ್ಮದಿಂದ, ಒನ್ರಾಮೆನ್ರು–ಒಂದಾಗುತ್ತದೆ ಎಂಬುವ, ಶೊಲ್ಲುಮ್–ವಾದಿಸುವ, ಅವ್ವಲ್ಲಲ್–ಆ ಘೋಷಣೆಯು, ಎಲ್ಲಾಮ್–ಎಲ್ಲವೂ, ಮೆಯ್‌ಮ್ಮದಿ–ವಾಸ್ತವ ಜ್ಞಾನಕ್ಕೆ, ಕಡಲ್–ಸಮುದ್ರದಂತೆ, ಎಮ್–ನಮ್ಮ ಯಾವ, ಇರಾಮಾನುಶನ್–ರಾಮಾನುಜಾಚಾರ್ಯರು, ವಾದಿಲ್–ವಾದದಲ್ಲಿ, ವೆನ್ರಾನ್–ಜಯಿಸಿದವರಾದರು.

ಪರಮಾತ್ಮನ ಸ್ವರೂಪವು ಪರಮ ವಿಲಕ್ಷಣವಾದುದೆಂದು ಹೇಳಿ, ಸಕಲ ಜೀವ ರಾಶಿಗಳೂ ಆ ಪರಮಾತ್ಮ ಸ್ವರೂಪವೇ, ಈ ಜೀವರು ದೇಹವನ್ನು ತ್ಯಜಿಸಿದಂದೇ, ಆ ಪರಮಾತ್ಮ ಸ್ವರೂಪದಲ್ಲಿ ಐಕ್ಯರಾಗುವರು ಎಂದು ವಾದಿಸುತ್ತಾ, ಅದೇ ಸತ್ಯವೆಂದೂ, ವೇದೋಕ್ತವೆಂದೂ ಕೆಲವು ಮೂರ್ಖರ ಪ್ರಲಾಪವನ್ನು, ರಾಮಾನುಜರು ಖಂಡಿಸಿ ಸತ್ಯವಾದ ಪರಮಾರ್ಥವನ್ನು ಸಾಧಿಸಿದರು. ಆ ಪರಮಾರ್ಥವು, ಚಿತ್ತು, ಅಚಿತ್ತು ಮತ್ತು ಈಶ್ವರ ಎಂಬ ತತ್ವಗಳು ಮೂರು. ಮೂರೂ ಸತ್ಯವೂ, ನಿತ್ಯವೂ ಆಗಿ, ಚಿದಚಿತ್ತುಗಳು ಈಶ್ವರನಿಗೆ ಶರೀರವು. ಅನಾದಿಯಾದ ಅವಿದ್ಯೆಯಿಂದ, ಮಾಡುವ, ನಾಶವಾಗುವ ಕರ್ಮಗಳಿಂದ ದೊರೆತ ಪ್ರಕೃತಿ ಸಂಬಂಧವೇ ಜೀವರ

ಸಹಜ ಜ್ಞಾನಾನಂದ ಸ್ವರೂಪವು ಮರೆಯಾಗಿರುವುದು. ಭಗವಂತನ ಕೃಪೆಯಿಂದ ಆ ಕರ್ಮಗಳು ತೊಲಗಿ ಸ್ವಸ್ವರೂಪವು ಪ್ರಕಾಶವಾಗುತ್ತದೆ, ಪರಮಪದ ಪ್ರಾಪ್ತಿಯಾಗುತ್ತದೆ. ಕೈಂಕರ್ಯಾನುಭವ, ಗುಣಾನುಭವ ರೂಪ ಪರ ಮಾನಂದವು ಸಿದ್ಧಿಸುವುದು, ಅದೇ ಮೋಕ್ಷವು.

**ಕಡಲಳವಾಯತಿಶೈಯೆಟ್ಟಿನುಳ್ಳುಮ್ ಕಲಿಯಿರುಳೇ,**
**ಮಿಡೈದರು ಕಾಲತ್ತಿರುಮಾನುಶನ್, ಮಿಕ್ಕನಾನ್ಮರೈಯಿನ್**
**ಶುಡರೊಳಿ ಯಾಲವ್ವಿರುಳೈತ್ತುರಂದಿಲ ನೇಲುಯಿರೈ**
**ಯುಡೈಯವನ್, ನಾರಣನೆನ್ರರಿವಾರಿಲ್ಲೈಯುತ್ತುಣರ್ನ್ದೇ. 59**

ಕಡಲವಾಯ–ನಾಲ್ಕು ಸಮುದ್ರದವರೆಗೆಯಿರುವ, ತಿಶೈಯೆಟ್ಟಿನುಳ್ಳುಮ್– ಸಕಲದಿಕ್ಕುಗಳಲ್ಲಿಯೂ, ಕಲಿ–ಶನಿಪ್ರಭಾವದಿಂದ ಒದಗಿದ, ಇರುಳೇ–ಅಜ್ಞಾನವೆಂಬ ಕತ್ತಲೆಯು, ಮಿಡೈತರು–ಅತಿಶಯವಾಗಿರುವ, ಕಾಲತ್ತು–ಕಾಲಹಲ್ಲಿ, ಇರಾಮಾನುಶನ್–ಶ್ರೀಮದ್ರಾಮಾನುಜಾಚಾರ್ಯರು, ಮಿಕ್ಕು–ಸರ್ವಪ್ರಮಾಣೋತ್ಕೃಷ್ಟವಾದ, ನಾನ್ಮರೈಯಿನ್–ನಾಲ್ಕು ವೇದಗಳ ಯಾವ, ಶುಡರೊಳಿಯಾಲ್–ಅತ್ಯಧಿಕವಾದ ತೇಜಸ್ಸಿನಿಂದ, ಆ ಇರುಳೈ–ಆ ಅಂಧಕಾರವನ್ನು, ತುರನ್ದಿಲನೇಲ್–ಹೋಗಲಾಡಿಸಲು ಆಗದೆ ಇರುವಾಗ, ಉಯಿರೈ–ಜೀವರನ್ನು, ಉಡೈಯವನ್–ಸ್ವಾಮಿಯಾದವನು, ನಾರಾಯಣನ್ ಎನ್ರು–ನಾರಾಯಣನೇ ಪರಾತ್ಪರನು, ಉತ್ತು–ಎಂಬ ತತ್ತ್ವಾರ್ಥದಿಂದ, ಉಣರ್ನ್ದು–ಅನುಸಂಧಾನ ಮಾಡುವ, ಅರಿವಾರ್–ತಿಳಿಯುವವರು, ಇಲ್ಲೈ–ಇಲ್ಲವು (ಸ್ವರೂಪಜ್ಞಾನವಿಲ್ಲದೆ ಹೋಗುವುದು).

ಚತುಸ್ಸಮುದ್ರಗಳು ಎಲ್ಲೆಯಾಗಿ ಉಳ್ಳ ಈ ಭೂಲೋಕದಲ್ಲಿ ಕಲಿಪುರುಷನ ಪ್ರಭಾವದಿಂದ ಆವೃತವಾದ ಅಜ್ಞಾನಾಂಧಕಾರವು ವಿಜೃಂಭಿಸುತ್ತಿರುವ ಕಾಲದಲ್ಲಿ ಶ್ರೀಮದ್ರಾಮಾನುಜಾಚಾರ್ಯರು ಅವತರಿಸಿ, ಎಲ್ಲೆಡೆ ಆವರಿಸಿದ್ದ ಕಲಿದೋಷವನ್ನು ತೊಲಗಿಸಿ, ವೇದಜ್ಯೋತಿಯನ್ನು ಪ್ರಸರಿಸುವಂತೆ ಮಾಡಿ, ಅಜ್ಞಾನಾಂಧಕಾರವನ್ನು ನಾಶಮಾಡಲು, ಎಲ್ಲರೂ ಶ್ರೀಮನ್ನಾರಾಯಣನೇ ಪರಾತ್ಪರನೆಂದೂ, ಸರ್ವಶೇಷಿ ಯೆಂಬ ಪರಮಾರ್ಥವನ್ನು ತಿಳಿದುಕೊಂಡು ಉದ್ಧಾರವಾದರು.

**ಉಣರ್ನ್ದಮೆಯ್ ಜ್ಞಾನಿಯರ್ ಯೋಗನ್ದೊರುಮ್,**
**ತಿರುವಾಯ್ಮೊಳಿಯಿನ್**
**ಮಣನ್ದರುಮಿನ್ನಿಶೈಮನ್ನುಮಿಡನ್ದೊರುಮ್, ಮಾಮಲರಾಳ್**
**ಪುಣರ್ನ್ದಪೊನ್ ಮಾರ್ಬನ್ ಪೊರುನ್ದುಮ್**
**ಪಡಿದೊರುಮ್ ಪುಕ್ಕುನಿರ್ಕುಮ್**
**ಕುಣನ್ದಿಗಳ್ ಕೊಂಡಲ್, ಇರಾಮಾನುಶನೆಂಗುಲಕ್ಕೊಳುನ್ದೇ. 60**

ಕುಣಮ್‌ತಿಗಳ್–ದಿವ್ಯಾತ್ಮಗುಣಗಳಿಂದ ಪ್ರಕಾಶಿಸುತ್ತಿದ್ದವರು, ಕೊಂಡಲ್–ಔದಾರ್ಯ ಉಳ್ಳವರೂ, ಎಮ್–ನಮ್ಮ, ಕುಲಮ್–ವಂಶಕ್ಕೆ, ಕೊಳನ್ದು–ಚಿಗುರಿನಂತಿರುವ, ಇರಾಮಾನುಶನ್–ಶ್ರೀಮದ್ರಾಮಾನುಜಾಚಾರ್ಯರು, ಉಣರ್‌ನ್ದು–ತಿಳಿದುಕೊಂಡ, ಮೇಯ್‌ಜ್ಞಾನಿಯರ್–ವಾಸ್ತವ ಜ್ಞಾನವಂತರ, ಯೊಗನ್ದೊರುಮ್–ಗೋಷ್ಠಿಯಲ್ಲಿರುವ ಸ್ಥಳಗಳೆಲ್ಲವೂ, ತಿರುವಾಯ್ಮೊಳಿಯಿನ್–ತಿರುವಾಯ್ಮೊಳಿಯ, ಮಣನ್ದರುಮ್–ಪರಿಮಳವುಳ್ಳ, ಇನ್–ವಿಲಕ್ಷಣನಾದ, ಇಶೈ–ಗಾನವನ್ನು, ಮುನ್ನುಮ್–ಯಾವಾಗಲೂ ಅನುಸಂಧಿಸುವ, ಇಡನ್ದೊರುಮ್–ಪ್ರತಿಯೊಂದು ಸ್ಥಳದಲ್ಲಿಯೂ, ಮಾಮಲರಾಳ್–ಪುಷ್ಪವಾಸಿನಿಯಾದ ಮಹಾಲಕ್ಷ್ಮಿಯು, ಪುಣರ್‌ನ್ದು–ಸೇರಿರುವ, ಪೊನ್–ರಮ್ಯವಾದ, ಮಾರ್ವನ್–ವಕ್ಷಸ್ಥಳವನ್ನುಳ್ಳ ಸರ್ವೇಶ್ವರನು, ಪೊರುನ್ದುಮ್–ವಾಸಮಾಡುವಂತಾ, ಪದಿದೊರುಮ್–ದಿವ್ಯ ದೇಶಗಳನ್ನು ಪ್ರವೇಶಿಸಿದ, ಇರಾಮಾನುಶನ್–ರಾಮಾನುಜರು, ಎಮ್‌ಕುಲಕೊಳುನ್ದು–ನಮ್ಮ ವಂಶಕ್ಕೆ ಚಿಗುರಿನಂತಿರುದಿರು.

ಜ್ಞಾನ, ಭಕ್ತಿ, ವೈರಾಗ್ಯಾದಿ ಸಮಸ್ತ ದಿವ್ಯ ಕಲ್ಯಾಣಗುಣ ಪರಿಪೂರ್ಣರೂ, ಶ್ರೀವೈಷ್ಣವ ಮತವನ್ನು ಅಭಿವೃದ್ಧಿ ಹೊಂದಿಸುವಂತವರೂ, ಆದ ಶ್ರೀಮದ್ರಾಮಾನುಜರು, ಭಗವತ್ ಸ್ವರೂಪರೂಪಗುಣ ವಿಭೂತಿಗಳನ್ನು ಪರಿಪೂರ್ಣವಾಗಿ ಅನುಭವಿಸಿದಂತವರಾದ ಭಕ್ತಿರೂಪ ಜ್ಞಾನವಂತರಾದ ಆಳ್ವಾರರುಗಳು ನೆಲೆಸಿರುವ ಸ್ಥಳಗಳಲ್ಲಿಯೂ, ಭಗವದ್ಭಾಗವತ ವಿಷಯಗಳನ್ನು ಪ್ರತಿಪಾದಿಸುವಂತಹ ತಿರುವಾಯ್ಮೊಳಿ ದಿವ್ಯಪ್ರಬಂಧವನ್ನು ಅಧ್ಯಯನಾನುಸಂಧಾನ ಮಾಡುವ ದಿವ್ಯ ಸ್ಥಳಗಳಲ್ಲಿ, ಪರಾತ್ಪರನಾದ ಶ್ರೀಯಃಪತಿಯು ಸಂತೋಷದಿಂದ ನಿತ್ಯವಾಸ ಮಾಡುವ ದಿವ್ಯ ಕ್ಷೇತ್ರಗಳಲ್ಲಿ ಅತ್ಯಂತ ಪ್ರೇಮಪೂರಿತವಾಗಿ ನೆಲೆಸಿರುವರು.

**ಕೊಳನ್ದುವಿಟ್ಟೋಡಿಪ್ಪಡರುಮ್ ವೆಂಗೋಳ್‌ವಿನ್ನೈಯಾಲ್, ನಿರಯ**
**ತ್ತಳುನ್ದಿಯಿಟ್ಟೇನ್ನೈವನ್ದಾಟ್ಕೊಂಡ ಪಿನ್ನುಮ್, ಅರುಮುನಿವರ್**
**ತೊಳುನ್ದವತ್ತೋನೆಮ್ಮಿರಾಮಾನುಶನ್ ತೊಲ್‌ಪುಗಳ್ ಶುಡರ್‌ಮಿ**
**ಕ್ಕೆಳುನ್ದದು, ಅತ್ತಾಲ್ ನಲ್ಲದಿಶಯಂಗ್ಕಂಡದಿರು ನಿಲಮೇ.** 61

ಅರು–(ಶ್ರೀಯಃಪತಿಯನ್ನು) ಹೊಂದಲು ಸಾಧ್ಯವಾಗದ, ಮುನಿವರ್–ಮಹಾತ್ಮರುಗಳಿಗೂ ಕೂಡ, ತೊಳುಮ್–ಆಶ್ರಯವನ್ನು ನೀಡಿದಂತವರಾದ, ತವತ್ತೋನ್–ಪ್ರಪತ್ತಿಯೆಂಬ ಮಹಾತಪಸ್ಸುಳ್ಳವರೂ ಆದ, ಎಮ್‌ರಾಮಾನುಶನ್–ನಮ್ಮ ರಾಮಾನುಜಾಚಾರ್ಯರ, ಪುಗಳ್–ಕಲ್ಯಾಣಗುಣಗಳು, ಕೊಳುಂದುವಿಟ್ಟು–

ವೃದ್ಧಿಹೊಂದುತ್ತಿರುವಾಗ, ಓಡಿ–ಓಡಿಬಂದು, ಪಡರುಮ್–ಅತಿ ಹೆಚ್ಚಿನದಾದ, ವೆಮ್–ಕ್ರೂರವಾದ, ಕೋಳ್–ಪ್ರಬಲವಾಗಿಯೂ ಇರುವ, ವಿನೈಯಾಲ್–ಕರ್ಮಗಳಿಂದ, ನಿರಯತ್ತು–ದುಃಖಕ್ಕೆ ಕಾರಣವಾದ ಸಂಸಾರವೆಂಬ ಈ ನರಕದಲ್ಲಿ, ಅಳುನ್ದಿಯಿಟ್ಟೇನೈ–ಮುಳುಗಿದ್ದ ನನ್ನನ್ನು, ವನ್ದು–ನಾನಿದ್ದ ಸ್ಥಳಕ್ಕೇ ಬಂದು, ಆಳ್ಕೊಂಡಪಿನ್ನುಮ್–ದಾಸನನ್ನಾಗಿ ಮಾಡಿಕೊಂಡ ಮೇಲೆ, ಶುಡರ್ಮಿಕ್ಕು–ನಿರವಧಿಕ ತೇಜಸ್ಸಿನಿಂದ, ಎಳುಂದು–(ಇಂತಹವರು ಇನ್ನಾರಾದರೂ ಇರುವರೇನೋ ಅವರನ್ನೂ ಉದ್ಧಾರ ಮಾಡಲೆಂದು) ಹುಡುಕುತ್ತಾ ವೃದ್ಧಿಹೊಂದುತ್ತಿರುವ, ಅತ್ತಾಲ್–ಅದರಿಂದ, ಇರುವಿಲಮ್–ವಿಸ್ತಾರವಾದ ಈ ಭೂಲೋಕವು, ನಲ್ ಅತಿಶಯಮ್–ಒಳ್ಳೆಯ ಆಶ್ಚರ್ಯವನ್ನು, ಕಂಡದು–ನೋಡುತ್ತಿದೆ.

ತಪಸ್ಸಂಪನ್ನರಾದವರು ಶ್ರಿಯಃಪತಿಯನ್ನು ಪಡೆಯಲು ಅಸಮರ್ಥರಾದಾಗ, ಭೂಲೋಕದಲ್ಲಿ ಅವತರಿಸಿದ್ದ, ಪ್ರಪತ್ತಿ ಎಂಬ ಮಹಾತಪಸ್ಸಿದ್ಧಿ ಪಡೆದಿರುವ ಯತಿರಾಜರನ್ನು ಆಶ್ರಯಿಸುವಂತಾಗಲು ಅವರ ಕಲ್ಯಾಣಗುಣಗಳು ವೃದ್ಧಿಹೊಂದುತ್ತಿರಲಾಗಿ, ಸರ್ವದಿಕ್ಕುಗಳಲ್ಲಿಯೂ ವ್ಯಾಪಿಸಿರುವ ನನ್ನ ದುಷ್ಕರ್ಮಗಳಿಂದ ಸಂಸಾರ ನರಕರೂಪದಲ್ಲಿ ಮುಳುಗಿದ್ದ ಪಾಪಿಯಾದ ನನ್ನನ್ನು, ಶೇಷಭೂತನನ್ನಾಗಿ ಮಾಡಿ ಕಂಡೊಡನೆ ನನ್ನ ತೇಜಸ್ಸು ವೃದ್ಧಿಹೊಂದಿತು. ಅದರಿಂದ ಈ ಲೋಕದವರೆಲ್ಲಾ, ಇಂತಹ ಮಹಿಮಾವಂತರನ್ನು ಎಲ್ಲೂ ಕಂಡಿಲ್ಲವೆಂದು ಆಶ್ಚರ್ಯಪಡುವರು.

**ಇರುನ್ದೇ ನಿರುಮಿನ್ನೈಪ್ಪಾಶಂಗಳತ್ತಿ, ಯಿನ್ರಿಯೊಾನಿಕ್ಕೈಯೆಯುಮ್**
**ಮರುನ್ದೇನಿನಿ ಎಮ್ಮಿರಾಮಾನುಶನ್, ಮನ್ನುಮಾಮಲರ್ತಾಳ್**
**ಪೊರುನ್ದಾನಿಲೈಯುಡೈಪ್ಪುನ್ಮೈಯಿನೋರ್ಕೊನ್ರುಮ್**
**ನನ್ಮೈಶೈಯ್ಯಾ**
**ಪ್ಪೇರುನ್ದೇವರೈಪ್ಪರವುಮ್, ಪೆರಿಯೊರ್ ತಮ್**
**ಕಳಲ್ ಪಿಡಿತ್ತೇ. 62**

ಎಮ್–ನಮಗೆ ನಾಥರಾದ, ಇರಾಮಾನುಶನ್–ರಾಮಾನುಜಾಚಾರ್ಯರ, ಮನ್ನು–ಬೆಳೆದ, ಮಾ–ಅತಿ ಪೂಜ್ಯವಾದ, ಮಲರ್–ಪರಮ ಭೋಗ್ಯವಾದ, ತಾಳ್–ಶ್ರೀಪಾದಗಳಲ್ಲಿ, ಪೊರುನ್ದಾ–ಸೇರದೆ ಇರುವ, ನಿಲೈಯುಡೈ–ಸ್ವಭಾವವುಳ್ಳವರು, ಪುನ್ಮೈಯಿನೋರ್ಕು–ದುರಭಿಮಾನ ಉಳ್ಳವರಿಗೂ, ಒನ್ರುಮ್–ಸ್ವಲ್ಪವಾದರೂ, ನನ್ಮೈ–ಒಳ್ಳೆಯದನ್ನು, ಶೆಯ್ಯಾ–ಮಾಡದೆ ಇರುವ, ಪೆರುನ್ದೇವರೈ–ನಿತ್ಯಸೂರಿ ಸಮಾನರಾದ ಶ್ರೀವೈಷ್ಣವರುಗಳೂ, ಪರವುಮ್–ಸ್ತೋತ್ರ ಮಾಡುತ್ತಿರುವ, ಪೆರಿಯೊರ್ತಮ್–ಮಹಾಪ್ರಭಾವವನ್ನುಳ್ಳ, ಕಳಲ್–ಶ್ರೀಪಾದಗಳನ್ನು,

ಪಿಡಿತ್ತು–ಆಶ್ರಯಿಸಿ, ಇನ್ರು–ಈಗ, ಇರು–(ಪುಣ್ಯಪಾಪಗಳೆಂಬ) ಎರಡು ವಿಧವಾದ, ವಿನೈ–ಕರ್ಮಗಳ ಯಾವ, ಪಾಶಂ–ಕಟ್ಟನ್ನು, ಕಳತ್ತಿ–ಬಿಡಿಸಿಕೊಂಡವನಾಗಿ, ಇರುನ್ದೇನ್–ಧನ್ಯನಾಗಿ ಇರುವೆನು, ಯಾನ್–ಇಂತಹ ನಾನು, ಇನಿ–ಇನ್ನು ಮೇಲೆ, ಇರೈಯುಂವುಮ್–ಮತ್ತೆ ಸ್ವಲ್ಪವಾದರೂ, ವರುನ್ದೇನ್–ವ್ಯಸನಪಡುವುದಿಲ್ಲ.

ನಮಗೆ ಸ್ವಾಮಿಯಾದ ರಾಮಾನುಜಾಚಾರ್ಯರ ಚರಣಾರವಿಂದಗಳನ್ನು ಆಶ್ರಯಿಸದ ದುರಭಿಮಾನಿಗಳಿಗೆ ಸಹಾಯ ಮಾಡದೆ ಇರುವ ಶ್ರೀವೈಷ್ಣವರನ್ನು ಉತ್ತಮ ದೇವತೆಗಳೆಂದು ಹೊಗಳುವ ಮಹನೀಯರ (ಕೂರತ್ತಾಳ್ವಾರರ) ಪಾದಾರ ವಿಂದಗಳನ್ನು ಆಶ್ರಯಿಸಿದ ಮೇಲೆ, ಈಗ ಸಕಲ ಕರ್ಮಗಳೂ ನಾಶವಾಗಿ ಕೃತಾರ್ಥ ನಾಗಿರುವೆನು. ಇನ್ನು ಯಾವ ವಿಧವಾದ ದುಃಖವನ್ನು ಹೊಂದಲಾರೆ.

ಮತ್ತೊಂದು ವ್ಯಾಖ್ಯಾನವು ಈ ರೀತಿ ಇದೆ: ಪೆರುಂದೇವರೈ–ಪೆರಿಯ ಪೆರುಮಾಳ್ ಎಂಬ ಶ್ರೀರಂಗನಾಥರನ್ನು, ಪರವುಮ್–ಸ್ತುತಿಪರಾಯಣರಾದವರು, ಪೆರಿಯೊರ್ ತಮ್–ಕೂರತ್ತಾಳ್ವಾರರು ಎಂಬುದು. ಇಂದಿನಿಂದ ಸರ್ವಕಾಲವೂ ಸದಾ ಪರಮಾನಂದಪೂರ್ಣನಾಗಿರುವೆನು. ಕಾರಣವೇನೆಂದರೆ, ಸರ್ವ ಕರ್ಮಬಂಧಗಳಿಂದ ವಿಮುಕ್ತಿ ಹೊಂದಿರುವೆನು. ಈ ಮುಕ್ತಿಗೆ ಕಾರಣವೆಂದರೆ ರಾಮಾನುಜರ ಚರಣಾ ಶ್ರಿತರಾದ ಮಹಾತ್ಮ ಕೂರತ್ತಾಳ್ವಾರರ ಚರಣಸಮಾಶ್ರಯವು ನನಗೆ ದೊರಕಿದುದ ರಿಂದ ಕೂರತ್ತಾಳ್ವಾರರು ಎಂತಹವರೆಂದರೆ ರಾಮಾನುಜರ ಭಕ್ತರಿಗೆ ಸರ್ವಸ್ವವನ್ನೂ ದಾನಮಾಡತಕ್ಕ ಶ್ರೀರಂಗನಾಥನ ಸ್ತುತಿ ಪರಾಯಣರಾದವರು; ಅಲ್ಲದೆ ಶ್ರೀರಾಮಾನುಜಾಚಾರ್ಯರ ಚರಣಗಳಲ್ಲಿ ಆಸಕ್ತಿ ಇಲ್ಲದವರಿಗೆ ಯಾವ ಉಪಕಾರವನ್ನೂ ಮಾಡದೆ ಇರುವಂತಹವರು.

**ಪಿಡಿಯೈತ್ತೊಡರುಮ್ ಕಳಿರೆನ್ನ, ಯಾನುನ್ ಪಿರಂಗಿಯಶೀರ್**
**ಅಡಿಯೈತ್ತೊಡರುಮ್ಪಡಿನಲ್ ಗವೇಂಡುಮ್, ಅರಶಮಯ**
**ಚ್ಚೆಡಿಯೈತೊಡರುಮ್ ಮರುಳ್ ಶೆರಿನ್ದೋರ್**
**ಶಿದೈನ್ದೋಡವನ್ದಿ**
**ಪ್ಪಡಿಯೈತ್ತೊಡರುಮ್, ಇರಾಮಾನುಶನ್**
**ಮಿಕ್ಕಪಂಡಿದನೇ.** 63

ಅರುಶಮಯಮ್–ದುರ್ಮತಗಳಲ್ಲಿ ಆಸಕ್ತರಾದ, ಶೆಡಿಯೈ–ಪಾಪಗಳನ್ನು, ತೊಡರುಮ್–ಅನುಸರಿಸಲು ಬೇಕಾದ, ಮರುಳ್–ಅವಿವೇಕವನ್ನು, ಶೆರಿನ್ದೋರ್–ತುಂಬಿಕೊಂಡವರು, ಶಿದೈನ್ದು–ಭಗ್ನಹೃದಯರಾಗಿ, ಓಡ–ಭಯದಿಂದ ಪಲಾಯನ ಮಾಡುವಂತೆ, ವಂದು–ಬಂದು, ಇಪ್ಪಡಿಯೈ–ಈ ಭೂಮಿಯಲ್ಲಿರುವವರನ್ನು

(ಅಂಗೀಕರಿಸುವುದಕ್ಕೆ), ತೊಡರುಮಾ್–(ಸಮಯವನ್ನು ಅರಿತು) ಅನುಸರಿಸುವಂತೆ, ವಿಕ್ಕಪಂಡಿತನ್–ನಿರವಧಿಕವಾದ ಪಾಂಡಿತ್ಯವುಳ್ಳ, ಇರಾಮಾನುಶಾ–ರಾಮಾನುಜರೇ!, ಪಿಡಿಯೈ–ಹೆಣ್ಣಾನೆಯನ್ನು (ಮೋಹದಿಂದ), ತೊಡರುಮಾ್–ಹಿಂಬಾಲಿಸುವ, ಕಳಿರೆನ್ನ–ಗಂಡಾನೆಯಂತೆ, ಯಾನ್–ನಾನೂ, ಉನ್–ತಮ್ಮ, ಶೀರ್–ಸೌಂದರ್ಯ, ಸೌಗಂಧ್ಯ, ಸೌಕುಮಾರ್ಯಾದಿ ಅನಂತ ಕಲ್ಯಾಣಗುಣಗಳಿಂದ, ಪಿರಂಗಿಯ–ಪ್ರಕಾಶಿಸುತ್ತಿರುವ, ಅಡಿಯೈ–ಶ್ರೀಪಾದಗಳನ್ನು, ತೊಡರುಮಾ್ಬಡಿ–ಅನುಸರಿಸುವ ಪದ್ಧತಿಯನ್ನು, ನಲ್ಗವೇಂಡುಮ್–ಅನುಗ್ರಹಿಸಬೇಕು.

ಪೊದರುಗಳೋಪಾದಿಯಲ್ಲಿ ಬೆಳೆದಿರುವ ದುರ್ಮತಗಳಲ್ಲಿ ಸಂಬಂಧವುಳ್ಳ, ಪೂರ್ಣವಾದ ಅವಿವೇಕದಿಂದ ತುಂಬಿದಂತವರನ್ನೂ ಪಾರುಗಾಣಿಸಿದ, ಮತ್ತೂ ಇಂತಹ ಸ್ತುತ್ಯಕಾರ್ಯದಲ್ಲಿಯೇ ನಿರತರಾಗಿ ಸಕಲ ಚೇತನರಿಗೂ ತತ್ವಜ್ಞಾನವನ್ನು ಉಪದೇಶಿಸಿದವರೂ, ಸಕಲ ಶಾಸ್ತ್ರಪಾರಂಗತರೂ, ಆದ ರಾಮಾನುಜಾಚಾರ್ಯರೇ!, ಗಂಡಾನೆಯು ಮೋಹದಿಂದ ಹೆಣ್ಣಾನೆಯನ್ನು ಅನುಸರಿಸುವಂತೆ, ತಮ್ಮ ದಿವ್ಯ ಚರಣಗಳಲ್ಲಿ ಅತ್ಯಂತ ಮೋಹಗೊಂಡವನಾಗಿ ಆಶ್ರಯಿಸಿರುವ ದಾಸನನ್ನು ಅನುಗ್ರಹಿಸಿ.

**ಪಂಡೆರುಮಾರನ್ ಪಶುನ್ದಮಿಳ್, ಆನಂದಮ್**
**ಪಾಯ್‌ಮದಮಾಯ್**
**ವಿಂಡಿಡವೆಂಗಿಳಿ ರಾಮಾನುಶಮುನಿವೇಳಮ್, ಮೆಯ್‌ಮ್ಮೈ**
**ಕೊಂಡನಲ್ ವೇದಕ್ಕೋಳುಂದಂಡಮೇನ್ದಿಕ್ಕು ವಲಯತ್ತೇ**
**ಮಂಡಿವಂದೇನ್ರದು, ವಾದಿಯರ್‌ಗಾಳುಂಗಳ್**
**ವಾಳ್ವತ್ತದೇ.** 64

ಎಂಗಳ್–ನಮಗೆ, ಇರಾಮಾನುಶಮುನಿ–ರಾಮಾನುಜರೆಂಬ, ವೇಳಮ್–ಆನೆಯು, ಮಾರನ್–ನಮ್ಮಾಳ್ವಾರ್‌ರು, ಪಣ್–ಹಾಡಿನಲ್ಲಿ, ತರು–ಉಪದೇಶಿಸಿದ, ಪಶುಮ್–ಮನೋಜ್ಞವಾದ, ತಮಿಳ್–ದ್ರಾವಿಡ ಭಾಷೆಯಲ್ಲಿನ ದಿವ್ಯಪ್ರಬಂಧಗಳಲ್ಲಿ, ಆನಂದಮ್–ಸಂತೋಷಿಸುತ್ತಾ, ಪಾಯ್–ಸೂಸುವ, ಮತಮಾಯ್–ಮದಜಲವಾಗಿ, ವಿಂಡಿಡ–ಪ್ರವಹಿಸುತ್ತಾ, ಮೆಯ್‌ಮ್ಮೈಕೊಂಡ–ಶಾಸ್ತ್ರಾರ್ಥವನ್ನು ಪ್ರತಿಪಾದಿಸುತ್ತಿದ್ದ, ನಲ್‌ವೇದಮ್–ವಿಲಕ್ಷಣವಾದ ವೇದವೆಂಬ, ಕೊಳುಂತಂಡಮ್–ರಮ್ಯವಾದ ದಂಡವನ್ನು, ಏಂದಿ–ಧರಿಸಿ, ಕುವಲಯತ್ತೈ–ಭೂಮಂಡಲದಲ್ಲಿ, ಮಂಡಿವನ್ದು–ತಳ್ಳಿಕೊಂಡು ಬಂದು, ಏನ್ರದು–ವಾದ ಪ್ರಿಯರಾಗಿ ಕಾದುವ, ವಾದಿಯರ್‌ಕಾಳ್–ಪ್ರತಿವಾದಿಗಳೇ, ಉಂಗಳ್–ನಿಮ್ಮ ಯಾವ, ವಾಳ್ವು–ವಾದ ಸಂಪತ್ತುಗಳೆಲ್ಲಾ, ಅತ್ತರು–ಮಣ್ಣುಗೂಡಿದುವು.

ಶ್ರೀ ಶಠಕೋಪರು ಕರುಣಿಸಿರುವ ತಿರುವಾಯ್ಮೊಳಿಯೇ ಮೊದಲಾದ ದಿವ್ಯ ಪ್ರಬಂಧಗಳನ್ನು ಅನುಸಂಧಾನ ಮಾಡುವುದರಿಂದ ಪಡೆದ ಆನಂದದಿಂದ ಉಕ್ಕಿದ ಮದಜಲರೂಪದಲ್ಲಿ ಪ್ರವಹಿಸಿದ, ವಿಶಿಷ್ಟಾದ್ವೈತ ಪರವಾದ ವಾಸ್ತವಾರ್ಥವನ್ನು ಪ್ರತಿಪಾದಿಸುತ್ತಿರುವ ವಿಲಕ್ಷಣವಾದ ವೇದವೆಂಬ ಮನೋಜ್ಞವಾದ ದಂಡವನ್ನು ತಮ್ಮ ಹಸ್ತದಲ್ಲಿ ಧರಿಸಿ, ನಮ್ಮ ರಾಮಾನುಜರು, ಮದಗಜದಂತೆ ಆ ಸೇತು ಶೀತಾ ಚಲ ಪರ್ಯಂತ, ವೇಂಕಟಾಚಲ, ಯಾದವಾಚಲ, ಸರಸ್ವತೀ ಪೀಠಾದಿ ದಿವ್ಯಸ್ಥಳಗಳಲ್ಲಿ ತಮ್ಮೊಡನೆ ವಾದಕ್ಕೆ ಬಯಸಿದ ವಿದ್ವಾಂಸರೆಲ್ಲರನ್ನೂ ನಿರ್ನಾಮಗೊಳಿಸಿದರು. ಬಾಹ್ಯ ಕುದೃಷ್ಟಿಯುಳ್ಳ ಓ ಪ್ರತಿವಾದಿಗಳೇ! ಶಿಷ್ಯ ಪ್ರಶಿಷ್ಯರುಗಳನ್ನು ಪಡೆದುಕೊಂಡಿರುವ ನಿಮ್ಮ ಸಂಪತ್ತೆಲ್ಲಾ ನಾಶವಾಯಿತಲ್ಲವೆ!

**ವಾಳ್ವತ್ತದು ತೊಲ್ಲೈವಾದಿಯರ್ಕ್ಕು,**
**ಎನ್ರುಮ್ ಮರೈಯವರ್ದಮ್**
**ತಾಳ್ವತ್ತದುತವಮ್ ತಾರಣಿಪೆತ್ತದು, ತತ್ತುವನೂಲ್**
**ಕೂಳತ್ತದು ಕುತ್ತಮೆಲ್ಲಾಮ್ ಪದಿತ್ತಗುಣತ್ತಿನರ್ಕ್ಕು**
**ಅನ್ನಾಳತ್ತದು, ನಮ್ಮಿರಾಮಾನುಶನ್ ತನ್ದಜ್ಞಾನತ್ತಿಲೇ.** 65

ನಮ್—ನಮಗೆ ಸ್ವಾಮಿಯಾಗಿರುವ, ಇರಾಮಾನುಶನ್—ರಾಮಾನುಜಾ ಚಾರ್ಯರು, ತಂದ—ಉಪಕರಿಸಿದ, ಜ್ಞಾನತ್ತಿಲೇ—ಜ್ಞಾನದಿಂದ, ತೊಲ್ಲೈ—ಪುರಾತನ ದಿಂದಲೂ ಇದ್ದ, ವಾದಿಯರ್ಕ್ಕು—ವಾದಮಾಡುವ ಬಾಹ್ಯ ಕುದೃಷ್ಟಿಯುಳ್ಳವರಿಗೆ, ವಾಳ್ವು—ಸಂಪದವು, ಅತ್ತದು—ಹೋಯಿತು, ಎನ್ರುಮ್ ಎಂದು ಯಾವಾಗಲೂ, ಮರೈಯವರ್ದಮ್—ವೈದಿಕರಾಗುವ, ತಾಳ್ವು—ಶ್ರಮವು, ಅತ್ತದು—ಹೋಯಿತು, ತಾರಣಿ—ಭೂಮಿಯು, ತವಮ್—ಭಾಗ್ಯವನ್ನು, ಪೆತ್ತದು—ಪಡೆದುಕೊಂಡಿತು, ತತ್ತುವನೂಲ್—ತತ್ವಗಗಳನ್ನು ಪ್ರತಿಪಾದಿಸುವಂತೆ ಶಾಸ್ತ್ರಗಳಲ್ಲಿ, ಕೂಳೆಲ್ಲಾಮ್—ಸಂದೇಹಗಳೆಲ್ಲವನ್ನೂ, ಅತ್ತದು—ನಿವಾರಿಸಲ್ಪಟ್ಟವು, ಕುತ್ತಮೆಲ್ಲಾಮ್—ದೋಷ ಗಳೆಲ್ಲವನ್ನೂ, ಪದಿತ್ತ—ಹೊತ್ತಿದ್ದ, ಕುಣತ್ತಿನರ್ಕ್ಕು—ಸ್ವಭಾವವುಳ್ಳವರಿಗೆ, ಅನ್ನಾಳ್—ಆ ದೋಷವು, ಅತ್ತದು—ನಶಿಸಿದವು.

ನಮಗೆ ಸ್ವಾಮಿಯಾಗಿರುವ ಯತಿರಾಜರು, ಉತ್ತಮವಾಗಿ ವಾದ ಮಾಡಿ, ಬಾಹ್ಯ ಕುದೃಷ್ಟಿಯುಳ್ಳವರನ್ನೆಲ್ಲಾ ನಿರ್ನಾಮಗೊಳಿಸಿ, ಸಕಲ ಚೇತನರಿಗೂ ತತ್ವಾರ್ಥಗಳನ್ನು ಉಪದೇಶಿಸಿದವರಾಗಿ, ಅವರು ಜ್ಞಾನವಂತರಾಗಲು, ಕ್ರಮ ಕ್ರಮ ವಾಗಿ, ಆಗಾಗಲೇ ದುರ್ಮತದ ವ್ಯಾಪಕತೆಯು ತಂತಾನೇ ನಾಶವಾಯಿತು. ಇದರಿಂದ ಸಕಲ ವೈದಿಕರ ಕೊರತೆಯು ನಿವಾರಿಸಲ್ಪಟ್ಟಿತು. ಭೂಮಿಯು ನೆಮ್ಮದಿ

ಪಡೆಯಿತು. ತತ್ತ್ವಪ್ರತಿಪಾದನೆಯು ರಾಮಾನುಜರಿಂದ ಆಗುತ್ತಲೇ, ಸಕಲ ಶಾಸ್ತ್ರಗಳಲ್ಲಿನ ಸಂಶಯಗಳು ತೀರಿದವು. ಹಿಂದೆ ದೋಷಯುಕ್ತರಾದವರು ಈಗ ದೋಷಮುಕ್ತರಾಗಿ ಗುಣವಂತರಾದರು.

**ಜ್ಞಾನವ್ ಕನಿನ್ದ ನಲಂಗೊಂಡು, ನಾಡೊರುಮ್ ನೈಬವರ್ಕು**
**ವಾನಂಗೊಡುಪ್ಪದು ಮಾದವನ್, ವಲ್ ವಿನೈಯೇನ್ ಮನತ್ತಿಲ್**
**ಈನಂಗಡಿನ್ದ ವಿರಾಮಾನುಶನ್ರನ್ನೈಯೆಯ್ದಿನರ್ಕು**
**ಅತ್ತಾನಂಗೊಡುಪ್ಪದು, ತನ್ ತಗವೆನ್ನುಮ್**
**ಶರಣ್ ಕೊಡುತ್ತೇ. 66**

ಜ್ಞಾನಮ್–ಜ್ಞಾನವು, ಕನಿನ್ದ–ಪರಿಪಕ್ವ ರೂಪವಾದ, ನಲಂಕೊಂಡು–ಪ್ರೇಮವನ್ನು ಉಳ್ಳವರಾಗಿ, ನಾಡೊರುಮ್–ಪ್ರತಿದಿನವೂ, ನೈಬವರ್ಕು–ಶೈಥಿಲ್ಯವನ್ನು ಹೊಂದಿದವರಿಗೆ, ಮಾದವನ್–ಶ್ರಿಯಃಪತಿಯಾದ ಸರ್ವೇಶ್ವರನು, ವಾನಮ್–ಮೋಕ್ಷವನ್ನು, ಕೊಡುಪ್ಪದು–ಕೊಡುವನು, ವಲ್ ವಿನೈಯೇನ್–ಮಹಾಪಾಪಿಯಾದ ನನ್ನ, ಮನತ್ತಿಲ್–ಹೃದಯದಲ್ಲಿ, ಈನಮ್–ದೋಷವನ್ನು, ಕದಿನ್ದ–ನಶಿಸುವಂತೆ ಮಾಡಿದ, ಇರಾಮಾನುಶನ್–ರಾಮಾನುಜರು, ತನ್ನೈ–ತಮ್ಮನ್ನು, ಎಯ್ದಿನರ್ಕು–ಹೊಂದಿದವರಿಗೆ, ತನ್–ತಮ್ಮ, ತಗವು ಎನ್ನುಮ್–ತಮ್ಮ ಕೃಪೆಯೆಂದು ಹೇಳಲ್ಪಡುವ, ಶರಣ್–ಸ್ವಾಮಿತ್ವವನ್ನು, ಕೊಡುತ್ತು–ಕೊಟ್ಟು, ಅತ್ತಾನಮ್–ಮೋಕ್ಷವನ್ನು, ಕೊಡುಪ್ಪದು–ಕೊಡಿಸಲಾಗುವುದು.

ಜ್ಞಾನವು ಪರಿಪಕ್ವವಾಗಿ ಪೂರ್ಣವಾದ ಪರಭಕ್ತಿಯಿಂದ, ಯಾವಾಗ, ಈ ದೇಹವನ್ನು ಬಿಟ್ಟು ಸರ್ವೇಶ್ವರನ ಗುಣಾನುಭವವನ್ನು ಪಡೆಯುವೆವೋ ಎಂದು ಎಲ್ಲ ಕಾಲದಲ್ಲೂ ಚಿಂತಿಸುವವರಿಗೇ, ಸರ್ವೇಶ್ವರನಾದ ಶ್ರಿಯಃಪತಿಯು ಪರಮಪದವನ್ನು ಕರುಣಿಸುತ್ತಾನೆ. ಮಹಾಪಾಪಗಳನ್ನು ಮಾಡಿದ ನನ್ನ ಹೃದಯದಲ್ಲಿ, ಪಾಪವಾಸನೆಯು ಸ್ವಲ್ಪವೂ ಇಲ್ಲದಂತೆ ನಾಶಮಾಡಿದ, ರಾಮಾನುಜಾಚಾರ್ಯರನ್ನು ಆಶ್ರಯಿಸಿದವರಿಗೆ, ತಮ್ಮ ಕೃಪೆಯೆಂಬ ಸಾಧನವನ್ನಿತ್ತು, ಅತ್ಯಂತ ಪ್ರಯಾಸಪಟ್ಟು ದೊರಕಿಸಿಕೊಳ್ಳಬಲ್ಲ ಪರಮಪದವನ್ನು ಸುಲಭವಾಗಿ ದೊರಕಿಸುವರು.

**ಚರಣಮಡೈನ್ದ ದರುಮನುಕ್ಕಾ, ಪಂಡುನೂತ್ತುವರೈ**
**ಮರಣಮಡೈವಿತ್ತ ಮಾಯವನ್ತನ್ನೈ, ವಣಂಗ ವೈತ್ತ**
**ಕರಣಮಿವೈಯುಮಕ್ಕನ್ರೆನ್ರಿರಾಮಾನುಶನುಯಿರ್ ಗಟ್ಕು**
**ಅರಣಂಗನ್ಮೈತ್ತಿಲನೇಲ್, ಅರಣಾರ್ ಮತ್ತಿವ್ವಾರುಯಿರ್ಕೇ. 67**

ಚರಣಮ್–ಶ್ರಿಯಃಪತಿಯ ಶ್ರೀಪಾದಗಳನ್ನು, ಅಡೈಂದ–ಆಶ್ರಯಿಸಿದ, ತರುಮನಕ್ಕು–ಧರ್ಮರಾಜನಿಗಾಗಿ, ಪಂಡು–ಹಿಂದೆ, ನೂತ್ತವರೈ–ದುರ್ಯೋಧನಾದಿ ನೂರು ಮಂದಿಯರನ್ನೂ, ಮರಣಂ ಅಡೈವಿತ್ತ–ಸಾಯುವಂತೆ ಮಾಡಿದ, ಮಾಯವನ್–ಅಘಟಿತ ಘಟನಾಸಮರ್ಥನಾದ ಸರ್ವೇಶ್ವರನು, ತನ್ನೈ–ತನ್ನನ್ನು, ವಣಂಗಿ–ಆಶ್ರಯಿಸಲು, ವೈತ್ತ–ಕೊಟ್ಟಿರುವ, ಕರಣಮ್–ಇಂದ್ರಿಯಗಳು, ಇವೈ–ಇವು, ಉಮಕ್ಕುಅನ್ರು–ನಿಮ್ಮಗಳಿಗೆ ಸ್ವಂತವಾದವುಗಳಲ್ಲ, ಎನ್ರು–ಎಂಬ, ಅಂಗು–ಅದೇ ಇಂದ್ರಿಯಗಳನ್ನು ಇತರ ವಿಷಯಗಳಿಗೆ ಉಪಯೋಗಿಸಿದಾಗ, ಇರಾಮಾನುಶನ್–ರಾಮಾನುಜಾಚಾರ್ಯರು, ಉಯಿರ್‌ಗಟ್ಕು–ಜೀವರಿಗೆ, ಅರಣ್–ರಕ್ಷಣೆಯನ್ನು, ಅಮೈತ್ತಿಲನೇಲ್–ಕೊಡಲು ಆಗದೆ ಇದ್ದಿದ್ದರೆ, ಇವ್ವಾರುಯಿರ್ಕ್ಕು–ಈ ಆತ್ಮರಿಗೆ, ಅರಣ್–ರಕ್ಷಕರು, ಮತ್ತು–ಬೇರೆ, ಆರ್–ಯಾರಿದ್ದಾರೆ.

ತನ್ನನ್ನು ಆಶ್ರಯಿಸಿದ ಧರ್ಮರಾಜನ ನಿಮಿತ್ತವಾಗಿ ಮಹಾಭಾರತ ಯುದ್ಧದಲ್ಲಿ ದುರ್ಯೋಧನಾದಿಗಳನ್ನು ನಾಶಮಾಡಿದ, ಅಘಟಿತ ಘಟನಾಸಾಮರ್ಥನಾದ ಸರ್ವೇಶ್ವರನು, ತನ್ನನ್ನು ಆಶ್ರಯಿಸುವುದಕ್ಕಾಗಿ ಮತ್ತು ಅದರಿಂದ ಉದ್ಧಾರವಾಗುವುದಕ್ಕಾಗಿ, ಚೇತನರಿಗೆ ಇಂದ್ರಿಯಾದಿಗಳನ್ನು ಇತ್ತನಲ್ಲದೆ, ತಮ್ಮ ಇಷ್ಟಾನುಸಾರ ಉಪಯೋಗಿಸಿಕೊಳ್ಳಲು ಅಲ್ಲ ಎಂಬ ಅರ್ಥವಿಶೇಷವನ್ನು ಯತಿರಾಜರು ತಮ್ಮ ನಿರ್ಹೇತುಕ ಕೃಪೆಯಿಂದ ಜೀವರಿಗೆ ಉಪದೇಶಿಸಿ ರಕ್ಷಿಸದೇ ಹೋದರೆಂದರೆ, ಈ ಜೀವಾತ್ಮರಿಗೆ ಉದ್ಧಾರ ಸಿದ್ಧಿಯು ದುರ್ಲಭವೇ ಆಗುತ್ತಿತ್ತು.

**ಆರೆನಕ್ಕಿನ್ರುನಿಗರ್ ಶೊಲ್ಲಿಲ್, ಮಾಯನನ್ರೈವರ್ ದೆಯ್‌ವ**
**ತ್ತೇರಿನಿರ್ಚ್ಚೊಪ್ಪಿಯಕೀದೈಯಿನ್ ಶೆಮ್ಮೈ, ಪ್ಪೊರುಳ್ ದೆರಿಯ**
**ಪ್ಪಾರಿನಿಚ್ಚೊನ್ನ ಇರಾಮಾನುಶನೈಪ್ಪಣಿಯುಮ್ ನಲ್ಲೋರ್**
**ಶೀರಿನಿರ್ಚ್ಚೆನ್ರು ಪಣಿನ್ದದು, ಎನ್ನಾವಿಯುಮ್**
**ಶಿನ್ದೈಯುಮೇ. 68**

ಮಾಯನ್–ಆಶ್ಚರ್ಯಭೂತನಾದ ಶ್ರೀಕೃಷ್ಣನು, ಅನ್ರು–ಯುದ್ಧರಂಗದಲ್ಲಿ ಅರ್ಜುನನು ವಿಷಾದ ಪೂರಿತನಾಗಿ ನಮ್ರನಾದಾಗ, ಐವರ್–ಪಂಚ ಪಾಂಡವರಲ್ಲಿ, ತೆಯ್‌ವಮ್–ದಿವ್ಯವಾದ, ತೇರಿನಿಲ್–ರಥದಲ್ಲಿ ಕುಳಿತು, ಶೆಪ್ಪಿಯ–ಹೇಳಿದ, ಕೀದೆಯಿನ್–ಭಗವದ್ಗೀತೆಯ, ಪೊರುಳ್–ಅರ್ಥವನ್ನು, ತೆರಿಯ ವಿಶದವಾಗಿ ತಿಳಿಯುವಂತೆ, ಪಾರಿನಿಲ್–ಭೂಮಿಯಲ್ಲಿ, ಶೊನ್ನ–ತಿಳಿಯಪಡಿಸಿದ, ಇರಾಮಾನುಶನೈ–ರಾಮಾನುಜಾಚಾರ್ಯರನ್ನು, ಪಣಿಯುಂ–ಆಶ್ರಯಿಸಿರುವ, ನಲ್ಲೋರ್–ಉತ್ತಮರು, ಶೀರಿನಿಲ್–ಕಲ್ಯಾಣಗುಣಗಳಲ್ಲಿ, ಶೆನ್ರು–(ಇತರ ವಿಷಯ

ಗಳಲ್ಲಿ ಸೇರದೆ) ಹೋಗಿ, ಎನ್ನಾವಿಯುಮ್–ನನ್ನ ಆತ್ಮವನ್ನು, ಶಿಂದೈಯುಮ್–ಹೃದಯವನ್ನೂ, ಪಡಿಂದದು–(ಅದನ್ನು ಬಿಟ್ಟು ಜೀವಿಸದು) ಎಂಬಂತೆ ಆಸಕ್ತವಾಗಿದೆ, ಶೊಲ್ಲಿಲ್–ಹೇಳಿದ ಕಡೆ, ಆರ್–ಯಾರು, ಎನಕ್ಕು–ನನಗೆ, ನಿಗರ್–ಸಮಾನರು.

ಅಘಟಿತ ಘಟನಾ ಸಾಮರ್ಥ್ಯವನ್ನು ತೋರಿ, ಸಕಲ ಚೇತನರನ್ನು ಆಶ್ಚರ್ಯಗೊಳಿಸಿದ ಶ್ರೀಕೃಷ್ಣನು ಪಾಂಡವರ ರಥದಲ್ಲಿ ಕುಳಿತು ಉಪದೇಶಿಸಿದ ಭಗವದ್ಗೀತೆಯ, ತತ್ವಾರ್ಥವನ್ನು ಗೀತಾಭಾಷ್ಯ ಎಂಬ ಹೆಸರಿನಿಂದ ಲೌಕಿಕರಿಗೆ ಅರ್ಥವಾಗುವಂತೆ ಪ್ರಸಾದಿಸಿದ, ರಾಮಾನುಜಾಚಾರ್ಯರನ್ನು ಆಶ್ರಯಿಸಿದ ಸತ್ಪುರುಷರ ಯಾವ ಕಲ್ಯಾಣಗುಣಗಳಿಗೆ ಸೋತು, ನನ್ನ ಪ್ರಾಣವು ಮನಸ್ಸಿನಿಂದ ತ್ವರಿತವಾಗಿ ಹೊರಟು, ಅಲ್ಲಿ ದೃಢವಾಗಿ ಆಸಕ್ತವಾಯಿತು. ಅದರಿಂದ ಈಗಿನ ಸ್ಥಿತಿಯನ್ನು ಆಲೋಚಿಸಿ ನೋಡಲು, ನನಗೆ ಸಮಾನರು ಯಾರೂ ಇಲ್ಲವು.

**ಶಿನ್ದೈಯಿನೋಡು ಕರಣಂಗಳ್ ಯಾವುಮ್**
**ಶಿದೈನ್ದು, ಮುನ್ನಾ**
**ಳನ್ದಮುತ್ತಾಳ್‌ನ್ದದುಕಂಡು, ಅವೈಯನ್ರುನಕ್ಕನ್ರುರುಳಾಲ್**
**ತನ್ದವರಂಗನುಮ್ ತನ್‌ಶರಣ್ ತನ್ದಿಲನ್ ತಾನದುತನ್ದು,**
**ಎನ್ದೈಯಿರಾಮಾನುಶನ್ ವನ್ದೆಡುತ್ತನನಿನ್ರನ್ನೈಯೇ.** 69

ಮುನ್ನಾಳ್–ಭಗವತ್ಸೃಷ್ಟಿಗೆ ಪೂರ್ವದಲ್ಲಿ, ಶಿನ್ದೈಯಿನೋಡು–(ಪ್ರಧಾನವಾದ) ಹೃದಯದಿಂದ ಕೂಡಿದ, ಕರಣಂಗಳ್ ಯಾವುಮ್–ಸಕಲೇಂದ್ರಿಯಗಳನ್ನೂ, ಶಿದೈನ್ದು–ಸವೆಸಿ, ಅನ್ದಮ್‌ಉತ್ತು–ನಶಿಸಿ, ಆಳ್‌ನ್ದದುಕಂಡು–ಅಣಗಿದುದನ್ನು ಕಂಡು, ಅವೈ–ಆ ಇಂದ್ರಿಯಗಳು, ಎನ್–ತನಗೆ, ಅನ್ರು–ಆ ಸೃಷ್ಟಿ ಸಮಯದಂದು, ಅರುಳಾಲ್–ಕೇವಲ ಕೃಪೆಯಿಂದ, ತಂದ–ಕೊಟ್ಟಂತಹ, ಅರಂಗನುಮ್–ಶ್ರೀರಂಗನಾಥನು, ತನ್‌ಶರಣ್–ತನ್ನ ಪಾದಾರವಿಂದಗಳನ್ನು, ತಂದು–ಕೊಟ್ಟು, ಎನ್ನೈ–ಸಂಸಾರ ಸಾಗರದಲ್ಲಿ ಮುಳುಗಿದ್ದ ನನ್ನನ್ನು, ಇನ್ರು–ಈಗ, ಎಡುತ್ತನನ್–ಕಡೆಹಾಯಿಸಿದರು.

ಮಹಾ ಪ್ರಳಯ ಕಾಲದಲ್ಲಿ, ಸಕಲೇಂದ್ರಿಯಗಳೂ ನಶಿಸಿ, ಅಚಿತ್ಪ್ರಾಯರಾಗಿ ಇದ್ದ ಜೀವರ ಸ್ಥಿತಿಯನ್ನು ಕಂಡು ಕನಿಕರಿಸಿ, (ಇಂದ್ರಿಯಾದಿಗಳನ್ನು) ಕರಣ ಕಳೇಬರಗಳನ್ನು ಆ ಸರ್ವೇಶ್ವರನಾದ ರಂಗನಾಥನು ಕೊಟ್ಟನೇ ವಿನಃ ತನ್ನ ಪಾದಾಶ್ರಯವನ್ನು ಕೊಡಲಿಲ್ಲ. ಆ ಕೊರತೆಯು ತೀರುವಂತೆ ರಾಮಾನುಜರು ಇಂದು ಚರಣಾಶ್ರಯ ದಾನಮಾಡಿ ಚೇತನರನ್ನು ಉದ್ಧಾರ ಮಾಡಿದರು.

**ಎನ್ನೈಯುಮ್ ಪಾರ್ತ್ತೆನ್ನಿಯಲ್ವೈಯುಮ್ ಪಾರ್ತ್ತು,**
**ಎಣ್ಣಿಲ್ ಪಲ್ ಗುಣತ್ತ**
**ಉನ್ನೈಯುಮ್ ಪಾರ್ಕ್ಕಿಲರುಳ್ ಶೆಯ್ ವದೇನಲಮ್,**
**ಅನ್ರಿಯೆನ್ಪಾಲ್**
**ಪಿನ್ನೈಯುಮ್ ಪಾರ್ಕ್ಕಿಲ್ ನಲಮುಳದೇಯುನ್**
**ಪೆರುಂಗರುಣೈ**
**ತನ್ನೈಯೆನ್ ಪಾರ್ಪರ್,**
**ಇರಾಮಾನುಶಾ ಉನ್ನೈಚ್ಚಾರ್ನ್ದವರೇ.** 70

ಎನ್ನೈಯುಮ್–ವಿಷಯಾಸಕ್ತನಾದ ನನ್ನನ್ನು, ಪಾರ್ತ್ತು–ಕಟಾಕ್ಷಿಸಿ, ಎನ್–ನನ್ನ, ಇಯಲ್ವಯುಮ್–ಕೆಟ್ಟನಡವಳಿಕೆಗಳನ್ನೂ, ಪಾರ್ತ್ತು–ಕಟಾಕ್ಷಿಸಿ, ಎಣ್ ಇಲ್–ಎಣೆಯಿಲ್ಲದ, ಪಲ್ ಕುಣತ್ತ–ಅನೇಕ ಕಲ್ಯಾಣಗುಣಗಳನ್ನು ಹೊಂದಿರುವ, ಉನ್ನೈಯುಮ್–ಮಹಾತ್ಮರಾದ ತಮ್ಮನ್ನು (ರಾಮಾನುಜರನ್ನು), ಪಾರ್ಕ್ಕಿಲ್–ನೋಡಿದಾಗ, ಅರುಳ್ ಶೆಯ್ ವದೇ–ನಿರ್ಹೇತುಕವಾದ ಕೃಪೆಯಿಂದ ಸಲಹಿದುದೇ, ನಲಮ್–ಒಳ್ಳೆಯದಾಯಿತು, ಅನ್ರಿ–ಇದೇ ಅಲ್ಲದೆ, ಪಿನ್ನೈಯುಮ್–ಮತ್ತು, ಪಾರ್ಕ್ಕಿಲ್–ವಿಚಾರ ಮಾಡಿದಾಗ, ಎನ್ ಪಾಲ್–ನನ್ನಲ್ಲಿ, ನಲಮ್–ಮೇಲಾದ ಗುಣವು, ಉಳದೇ–ಇದಯೇ, ಉನ್ನೈ–ತಮ್ಮನ್ನು, ಶಾರ್ನ್ದವರ್–ಆಶ್ರಯಿಸಿದವರು, ಉನ್–ತಮ್ಮ, ಪೆರುಮ್ ಕರುಣೈ ತನ್ನೈ–ನಿರವಧಿಕ ಕೃಪೆಯನ್ನು, ಎನ್–ಯಾವ ರೀತಿಯಲ್ಲಿ, ಪಾರ್ ಪರ್–ನೋಡುತ್ತಾರೆ.

ಓ ರಾಮಾನುಜಾಚಾರ್ಯರೇ! ಯಾವ ನನ್ನ ಘೋರತರ ದುಷ್ಕೃತ್ಯಗಳನ್ನೂ, ಮಹಾತ್ಮರಾದ ತಮ್ಮ ಎಣೆ ಇಲ್ಲದ ಕಲ್ಯಾಣಗುಣಗಳನ್ನೂ ನೋಡಿದಾಗ, ನನ್ನಂತಹ ನೀಚನನ್ನೂ ಅಂಗೀಕರಿಸಿ ಮೇಲೆನಿಸಿದಿರಿ, ಇದನ್ನು ಬಿಟ್ಟು ನಾನು ಮಾಡಿದ ಕೃತ್ಯಗಳನ್ನು ಎಣಿಸಿ ನೋಡಲು, ಉತ್ತಮ ಗುಣಗಳಾವುವೂ ಇಲ್ಲದ ನನ್ನನ್ನು ಬಿಡಬೇಕಾಗಿತ್ತು. ಗುಣವಂತರಾದ, ಸರ್ವೋತ್ತಮರಾದ ರಾಮಾನುಜರನ್ನು ಆಶ್ರಯಿಸಲು ಬಂದವರು ನೀಚರೆಂಬುದನ್ನು ಎಣಿಸಿ ಬಿಟ್ಟಿದ್ದಿರಾದರೆ ನಿಮ್ಮನ್ನು ಆಶ್ರಯಿಸಿದವರು ನಿಮ್ಮ ಕೃಪೆಯನ್ನು ಏನೆಂದು ಭಾವಿಸುತ್ತಿದ್ದರು ?

ಶಾರ್ನ್ದದೆನ್ ಶಿನ್ದೈಯುನ್ ತಾಳಿಣೈಕ್ಕೀಳ್,
ಅನ್ಬುದಾನ್ ಮಿಗವುಮ್
ಕೂರ್ನ್ದದತ್ತಾಮರೈತ್ತಾಳ್‌ಗಳುಕ್ಕು,
ಉನ್ರನ್‌ಕುಣಂಗಳುಕ್ಕೇ
ಶೀರ್ನ್ದದೆನ್‌ಶೆಯ್‌ಗೈಮುನ್ ಶೆಯ್‌ವಿನೈ ನೀಶೆಯ್
ವಿನೈಯದನಾಲ್
ಪೇರ್ನ್ದದು, ವಣ್ಮೈಯಿರಾಮಾನುಶಾವೆಮ್
ಪೆರುಂದಗೈಯೇ. 71

ವಣ್ಮೈ–(ಪಡೆಯುವವನು ತುಚ್ಛನಾದರೂ, ಕೊಡುವವನು ಅದನ್ನು ನೋಡದೆ ಇರುವಂತ) ಔದಾರ್ಯಗುಣಗಳನ್ನು, ಎಮ್–ನಮ್ಮ, ಪೆರುಂದಗೈ–ಅತ್ಯಂತ ಮಹಿಮೆಯುಳ್ಳ, ಇರಾಮಾನುಶ–ರಾಮಾನುಜರೇ, ಎನ್–ನನ್ನ, ಶಿನ್ದೈ–ಹೃದಯವು, ಉನ್–ಪ್ರಾಪ್ಯಶೇಷಿಯಾದ ತಮ್ಮನ್ನು, ಇಣೈ–ಕೂಡಿರುವ, ತಾಳ್ ಕೀಳ್–ಶ್ರೀಪಾದಾರವಿಂದಗಳಲ್ಲಿ, ಶಾರ್ನ್ದದು–ಹೊಂದಿರುವುದು, ಅತ್ತಾಮರೈತ್ತಾಳ್ ಗಳಕ್ಕು–ತಾವರೆ ಪುಷ್ಪಗಳಂತಹ ಆ ಶ್ರೀಪಾದಗಳಿಗೆ, ಅನ್ಬುದಾನ್–ಸ್ನೇಹವಾದುದು, ಮಿಗವುಮ್–ನಿರವಧಿಕವಾದಂತೆ, ಕೂರ್ನ್ದದು–ಅತಿಶಯವಾಗಿದೆ, ಎನ್–ನನ್ನ, ಶೆಯ್‌ಗೈ–ವೃತ್ತಿಯಾದುದು, ಉನ್ದನ್–ತಮ್ಮ ಯಾವ, ಕುಣಂಗಳುಕ್ಕೇ–ಆ ದಿವ್ಯ ಗುಣಗಳಿಗೇ, ಶೀರ್ನ್ದದು–ಅಪೇಕ್ಷೆಪಡುತ್ತಾ, ಮುನ್‌ಶೆಯ್‌ವಿನೈ–ಪೂರ್ವದಲ್ಲಿ ಮಾಡಿದ ಕರ್ಮಗಳನ್ನು, ನೀ–(ಅವನ್ನು ನಿವಾರಿಸಿದ) ತಾವು, ಶೆಯ್–ಮಾಡಿದ, ಅದು–ಆ, ವಿನೈಯಾಲ್–ಕೃಪೆಯಿಂದ, ಪೇರ್ನ್ದದು–ಬಿಟ್ಟುಹೋಯಿತು.

ಸ್ವರೂಪಜ್ಞಾನಾದಿಗಳನ್ನು ಲಭ್ಯಮಾಡಿಕೊಳ್ಳಲಿಚ್ಛಿಸುವವನು ಕೀಳೆಂದು ಆಲೋಚಿಸದೆ ಕರುಣಿಸುವ, ಅತಿ ಗಂಭೀರ ಸ್ವಭಾವವುಳ್ಳ ಸ್ವಾಮಿಯಾದ ರಾಮಾನುಜರೇ! ನನ್ನ ಹೃದಯವು ತಮ್ಮ ಶ್ರೀಪಾದಗಳಂದು ಕೂಡಿ ಹೊಂದಿ ಕೊಂಡಿರುವುದು. ಆ ಶ್ರೀಪಾದಗಳಲ್ಲಿ ಭಕ್ತಿಯುಂಟಾದುದೂ ಅತಿಶಯವಾದುದು, ನಾನು ಮಹಾತ್ಮರಾದ ತಮ್ಮ ದಿವ್ಯಗುಣಗಳಲ್ಲಿ ಹೆಚ್ಚಿನ ಅಪೇಕ್ಷೆಹೊಂದಿ, ತಮ್ಮ ಕೈಂಕರ್ಯದಲ್ಲಿ ಆಸಕ್ತನಾಗಿರುವವನು. ಹೀಗಿರುವಾಗ ನನ್ನ ಪೂರ್ವಾರ್ಜಿತ ಕರ್ಮ ಗಳೆಲ್ಲಾ ತಮ್ಮ ಕೃಪೆಯಿಂದ ನನ್ನನ್ನು ಬಿಟ್ಟು ಪಲಾಯನ ಮಾಡಿದವು.

**ಕೈತ್ತನನ್ ತೀಯಶಮಯಙ್ಗಳ್ ಕಲಗರ್ೈ, ಕಾಶಿನಿಕ್ಕೇ**
**ಉಯ್ತ್ತನನ್ ತೂಯಮರೈನೆರಿದನ್ನೈ,**
**ಯೆನ್ರುನ್ನಿಯುಳ್ಳಿವರ್**
**ನೆಯ್ತ್ತವನ್ನೋಡಿರುನ್ದೇತ್ತುಮ್ ನಿರೈಪುಗಳೋರುಡನೇ**
**ವೈತ್ತನನೆನ್ನೈ, ಇರಾಮಾನುಶನ್ ಮಿಕ್ಕವಣ್ಮೈಶೆಯ್ದೇ. 72**

ಇರಾಮಾನುಶನ್–ರಾಮಾನುಜರು, ಮಿಕ್ಕವಣ್ಮೈಶೆಯ್ದು–ಹೆಚ್ಚಿನ ತಮ್ಮ ಉದಾರ ಗುಣದಿಂದ, ತೀಯ–ನೀಚವಾದ, ಶಮಯಮ್–ಸಿದ್ಧಾಂತಗಳನ್ನೇ ಹಿಡಿದು ಕೊಂಡು, ಕಲಗರ್ೈ–ಕಲಹ ಮಾಡುತ್ತಿದ್ದಂತವರನ್ನು, ಕೈತ್ತನನ್–ಜಯಿಸಿದವರಾಗಿ, ತೂಯ–ಪರಿಶುದ್ಧವಾದ, ಮರೈನೆರಿತನ್ನೈ–ವೇದಮಾರ್ಗವನ್ನು, ಕಾಶಿನುಕ್ಕು–ಭೂಮಿಯಲ್ಲಿ, ಉಯ್ತ್ತನನ್–ಪ್ರವರ್ತಿಸುವಂತೆ ಮಾಡಿದರು, ಎನ್ರು–ಎಂದು, ಉನ್ನಿ–ಅನುಸಂಧಾನ ಮಾಡುವ, ಉಳ್ಳಮ್–ಮನಸ್ಸು, ನೆಯ್ತ್ತು–ಮೃದುವಾದ, ಅವ್ವನೋಡು–ಪ್ರೇಮದಿಂದ, ಇರುಂದು–ಇದ್ದು, ಏತ್ತುಮ್–ಸ್ತೋತ್ರ ಮಾಡುತ್ತಿರುವ, ನಿರೈ–ಸಂಪೂರ್ಣವಾದ, ಪುಗಳೋರುಡನೆ–ಪರಿಪೂರ್ಣ ಗುಣವಂತರೊಡನೆಯೂ ಸಹ, ಎನ್ನೈ–ನನ್ನನ್ನು, ವೈತ್ತನನ್–ಕರುಣಿಸಿ ಸೇರಿಸಿದರು.

ರಾಮಾನುಜರು ತಮ್ಮ ಔದಾರ್ಯಾತಿಶಯ ಗುಣಗಳಿಂದ, ಹೆಚ್ಚಿನ ನೀಚವಾದ ವೇದಬಾಹಿರ ಬೌದ್ಧಾದಿ ಕುಮತಗಳನ್ನು ಅವಲಂಬಿಸಿ ಕಲಹ ಮಾಡುತ್ತಿದ್ದವರನ್ನು ನಾಶಗೊಳಿಸಿ (ಅವರನ್ನು ವಾದದಲ್ಲಿ ಸೋಲಿಸಿ, ತಮ್ಮ ಮತವನ್ನು ಅವಲಂಬಿಸುವಂತೆ ಮಾಡಿ), ಪರಿಶುದ್ಧವಾದ ವೇದಮಾರ್ಗವನ್ನು ಭೂಮಂಡಲದಲ್ಲೆಲ್ಲಾ ಪ್ರತಿಷ್ಠಾಪಿಸಿದರು. ಇಂತಹ ಯತಿರಾಜರ ವೈಭವವನ್ನು ಅನುಸಂಧಾನ ಮಾಡಿ, ಪ್ರೇಮಾತಿಶಯದಿಂದ ಸ್ತೋತ್ರಮಾಡುವ ಮಹನೀಯರ ಗೋಷ್ಠಿಗೆ ನನ್ನನ್ನು ಸೇರಿಸಿ ಕರುಣೆ ತೋರಿದ ಮಹಾತ್ಮರಾಗಿದ್ದಾರೆ.

**ವಣ್ಮೈಯಿನಾಲುಮ್ ತನ್ ಮಾದಗವಾಲುಮ್,**
**ಮದಿಪುರೈಯುಮ್**
**ತಣ್ಮೈಯಿನಾಲುಮಿತ್ತಾರಣಿಯೋರ್ಗಟ್ಕು,**
**ತಾನ್ ಶರಣಾಯ್**
**ಉಣ್ಮೈಯಿನನ್ ಜ್ಞಾನಮುರೈತ್ತವಿರಾಮಾನುಶನ್ನೈಯುನ್ನುಮ್**
**ತಿಣ್ಮೈಯಲ್ಲಾಲೆನಿಕ್ಕಿಲ್ಲೈ, ಮತ್ತೋರ್ ನಿಲೈ**
**ತೇರ್ನ್ದಿಡಿಲೇ. 73**

ತನ್—ತಮ್ಮ, ವಣ್ಮೈಯಿನಾಲುಮ್—ಔದಾರ್ಯದಿಂದ, ಮಾಗದಮಾಲುಮ್—ಪರಮಕೃಪೆಯಿಂದ, ಮದಿಮುಯ್ಯುಮ್—ತಾಪಹರನಾದ, ಸಂತೋಷವನ್ನೀವ ಚಂದ್ರನಂತೆ, ತಣ್ಮೈಯಿನಾಲುಮ್—ಸೌಮ್ಯ ಸ್ವಭಾವದಿಂದ, ಇತ್ತಾರಣಿಯೋರ್ ಗಟ್ಕು—ಭೂಮಿಯಲ್ಲಿರುವವರಿಗೆ, ತಾನ್—ತಾವೇ, ಶರಣಾಯ್—ರಕ್ಷಕರಾಗಿದ್ದು, ಉಣ್ಮೈ—ವಾಸ್ತವಾಗಿ, ನಲ್—ವಿಲಕ್ಷಣವಾದ, ಜ್ಞಾನಮ್—ಜ್ಞಾನವನ್ನು, ಉರೈತ್ತ—ಪ್ರತಿಪಾದಿಸಿದ, ಇರಾಮಾನುಶನೈ—ರಾಮಾನುಜಾಚಾರ್ಯರನ್ನು, ಉನ್ನುಮ್—ಅನುಸಂಧಾನ ಮಾಡುವ, ತಿಣ್ಮೈಯಲ್ಲಾಲ್—ಸಾಮರ್ಥ್ಯವಲ್ಲದೆ, ತೇರ್ನ್ದಿಡಿಲ್—ವಿಚಾರಿಸಿ ಯೋಚನೆ ಮಾಡಲು, ಎನಕ್ಕು—ನನಗೆ, ಮತ್ತು—ಅನ್ಯವಾದ, ಓರ್ನಿಲೈ—ಯಾವ ಕಾರಣವೂ, ಇಲ್ಲೈ—ಇಲ್ಲವು.

ಉಡೈಯವರು ತಮ್ಮ ಉದಾರ ಸ್ವಭಾವದಿಂದ, ಜೀವರನ್ನು ರಕ್ಷಿಸಲು, ಚಂದ್ರನಂತೆ ಆಹ್ಲಾದ ಮತ್ತು ಸೌಮ್ಯ ಸ್ವಭಾವದಿಂದ ತಾವೇ ರಕ್ಷಕರಾಗಿ ವಿಲಕ್ಷಣ ರೀತಿಯಲ್ಲಿ ಉಪದೇಶಮಾಡಿ ಉದ್ಧಾರ ಮಾಡಿದರು ಎಂಬುದನ್ನು ಅನುಸಂಧಾನ ಮಾಡುವ ನನಗೆ ಪ್ರೇಮವಿಲ್ಲ ಎಂದು ಅಲ್ಲ.

**ತೇರಾರ್ ಮರೈಯಿನ್ ತಿರಮೆನ್ರು, ಮಾಯವನ್ ತೀಯವರೈ**
**ಕ್ಕೂರಾಳಿಕೊಂಡು ಕುರೈಪ್ಪದು, ಕೊಂಡಲನೈಯವಣ್ಮೈ**
**ಯೇರಾರ್ ಗುಣತ್ತೆಮ್ಮಿರಾಮಾನುಶನವ್ವೆಳಿಲ್ ಮರೈಯಿಲ್**
**ಶೇರಾನವರೈಚ್ಚಿದೈಪ್ಪದು, ಅಪ್ಪೋದೊರುಶಿನ್ದೈಶೆಯ್ದೇ.** 74

ಮರೈಯಿನ್—ವೇದಗಳ ಯಾವ, ತಿರಮ್—ಪ್ರಕಾಶವನ್ನು, ತೇದಾರ್—ನಿರೂಪಿಸರು, ಎನ್ರು—ಎಂದು, ಮಾಯವನ್—ಆಶ್ಚರ್ಯ ಜ್ಞಾನಸಂಪನ್ನ ಸರ್ವೇಶ್ವರನು, ತೀಯವರೈ—ದುರ್ಮಾರ್ಗಿಗಳನ್ನು, ಕೂರ್—ಭಯಂಕರವಾದ (ಹರಿತವಾದ), ಆಳಿ ಕೊಂಡು—ಚಕ್ರವನ್ನು ಧರಿಸಿ, ಕುರೈಪ್ಪದು—ಕತ್ತರಿಸುವಂತದ್ದಾಗಿದೆ, ಕೊಂಡಲ ನೈಯ—ಎಲ್ಲರನ್ನೂ ಸಲಹುವ ಇಚ್ಛೆಯಿಂದ ಮೋಡಗಳ ರೀತಿಯಲ್ಲಿ, ವಣ್ಮೈ—ಉದಾರ ಸ್ವಭಾವದಿಂದ, ಏದಾರ್—ಹೆಚ್ಚಿನ ಉತ್ತಮವಾದ, ಕರಣತ್ತು—ವಾತ್ಸಲ್ಯ, ಕಾರುಣ್ಯ, ಸೌಶೀಲ್ಯಾದಿಗುಣಗಳಿಂದ, ಎಮ್ಮಿರಾಮಾನುಶನ್—ನಮ್ಮ ರಾಮಾನುಜಾಚಾರ್ಯರು, ಅವ್ವೆಳಿಲ್—ಅಂತಹ ವಿಲಕ್ಷಣವಾದ, ಮರೈಯಿಲ್—ವೇದ ಗಳಲ್ಲಿ, ಶೇರಾದವರ್—ನಂಬಿಕೆಯಿಲ್ಲದ ಮೂರ್ಖವಾದಿಗಳನ್ನು, ಶಿದೈಪ್ಪದು—ನಶಿಸು ವಂತೆ ಮಾಡಿದರು, ಅಪ್ಪೋದು—ಆ ಸಮಯದಲ್ಲಿ, ಒರು—ಒಂದು ವಿಲಕ್ಷಣ, ಶಿನ್ದೈ ಶೈದೆ—ಆಲೋಚನೆಯನ್ನು ಮಾಡಿದೆ.

ಯುಕ್ತಾಯುಕ್ತ ವಿವೇಕವಿಲ್ಲದವರನ್ನು, ಅಪೌರುಷೇಯವಾದ ಪರಮಾತ್ಮನ ಆಜ್ಞಾರೂಪವಾದ ವೇದಗಳನ್ನು ಅತಿಕ್ರಮಿಸಿ ಪ್ರವರ್ತಿಸುವ ದುಷ್ಟರನ್ನು ಸಂಹಾರ ಮಾಡಲು ಪರಮಾತ್ಮನು, ಅನೇಕ ಅವತಾರಗಳನ್ನೆತ್ತಿ ತನ್ನ ಅರಿಭಯಂಕರವಾದ ಸುದರ್ಶನವನ್ನು ಕೈಯಲ್ಲಿ ಧರಿಸಿ ಶ್ರಮಪಡಬೇಕಾಯಿತು. ಇಲ್ಲಿ ರಾಮಾನುಜರು ತಮ್ಮ ಪ್ರೇಮ, ಔದಾರ್ಯಾತಿಶಯವಾದ ಕಲ್ಯಾಣ ಗುಣಗಳಿಂದಲೂ, ಮೇಘದಂತೆ ಸಮತೌದಾರ್ಯದಿಂದಲೂ, ಅಲ್ಪಜ್ಞಾನರಾದ ಬಾಹ್ಯ ಕುದೃಷ್ಟಿ ಮತಸ್ಥರನ್ನು ತಮ್ಮ ವಿಲಕ್ಷಣ ವಾದಗಳಿಂದಲೂ ಸೋಲಿಸಿ ತಮ್ಮ ಸಿದ್ಧಾಂತವನ್ನು ಒಪ್ಪುವಂತೆ ಮಾಡಿ ಅವರ ಹಿಂದಿನ ಅವೈದಿಕ ಸಿದ್ಧಾಂತಗಳನ್ನು ನಿರ್ನಾಮ ಮಾಡಿದುದರಲ್ಲಿ ಯತಿರಾಜರೇ ಮಹಾಪ್ರಭಾವಶಾಲಿಗಳೆಂಬ ಆಲೋಚನೆಯು ಬಂದಿದೆ.

**ಶೆಯ್‌ತ್ತಲೈಚ್ಚಂಗಮ್ ಶೆಳುಮುತ್ತಮೀನುಮ್, ತಿರುವರಂಗರ್**
**ಕೈತ್ತಲತ್ತಾಳಿಯುಮ್ ಶಂಗಮುಮೇನ್ದಿ, ನಂಗಣ್‌ಮುಗಪ್ಪೇ**
**ಮೊಯ್‌ತ್ತಲೈತ್ತುನ್ನೈ ವಿಡೇನೆನ್ರಿರುಕ್ಕಿಲುಮ್ ನಿನ್‌ಪುಗಳೇ**
**ಮೊಯ್‌ತ್ತಲೈಕ್ಕುಮ್‌ವನ್ದು, ಇರಾಮಾನುಶಾವೆನ್ನೈ**
**ಮುತ್ತುನಿನ್ರೇ.** 75

ಶೆಯ್‌ತ್ತಲೈ-(ಕಾವೇರಿ ನದಿಯ ಜಲದಿಂದ ಸಮೃದ್ಧಿಯಾಗಿರುವ) ಹೊಲಗದ್ದೆಗಳಲ್ಲಿ, ಶಂಗಮ್-ಶಂಖಗಳು, ಶೆಳು-ರಮ್ಯವಾದ, ಮುತ್ತಮ್-ಮುತ್ತುಗಳನ್ನು, ಈನುಮ್-ಪ್ರಸವಿಸುತ್ತಿರಲು, ಅರಂಗರ್-ಶ್ರೀರಂಗನಾಥಸ್ವಾಮಿಯು, ತಿರು-ಅಂದವಾದ, ಕೈತ್ತಲತ್ತು-ಶ್ರೀಹಸ್ತಗಳಲ್ಲಿ, ಆಳಿಯುಮ್-ಸುದರ್ಶನವನ್ನೂ, ಶಂಗಮುಮ್-ಪಾಂಚಜನ್ಯವೆಂಬ ಶಂಖವನ್ನೂ, ಏನ್ದಿ-ಧರಿಸಿ, ನಮ್-ನಮ್ಮ, ಕಣ್ಮುಗತ್ತೇ-ಕಣ್ಣೆದುರಿಗೇ, ಮೊಯ್‌ತ್ತು-ಇರುವಂತಹವನಾಗಿ, ಅಲೈತ್ತು-(ಸೌಂದರ್ಯಾದಿ ಗುಣಗಳಿಂದ) ಬುದ್ಧಿಯನ್ನು ಚಪಲಗೊಳಿಸುವಂತೆ ಮಾಡಿ, ಉನ್ನೈ-ನಿನ್ನನ್ನು, ವಿಡೇನ್-ಬಿಡೆನು, ಎನ್ರು-ಎಂದು, ಇರುಕ್ಕಿಲುಮ್-ಇರುವಾಗ್ಯೆ, ಇರಾಮಾನುಶಾ-ರಾಮಾನುಜರೆ, ನಿನ್-ತಮ್ಮ ದೇವರಂತ, ಪುಗಳ್-ದಿವ್ಯ ಕಲ್ಯಾಣ ಗುಣಗಳೆಲ್ಲಾ, ವನ್ದು-ಬಂದು, ಎನ್ನೈ-ನನ್ನನ್ನು, ಮುತ್ತುಮ್-ಸಂಪೂರ್ಣವಾಗಿ, ನಿನ್ರು-ಸುತ್ತುವರಿದು ನಿಂತು, ಮೊಯ್‌ತ್ತು-ಆಕ್ರಮಿಸಿಕೊಂಡವು.

ಕಾವೇರಿ ಜಲವು ಹೊಲಗಳಿಗೆ ಪ್ರವೇಶಿಸಿ ಪ್ರವಹಿಸಿದಾಗ ಶಂಖಗಳು (ಕಪ್ಪೆಚಿಪ್ಪು ಅಥವಾ ಮುತ್ತಿನ ಚಿಪ್ಪುಗಳು) ಉತ್ತಮವಾದ ಮುತ್ತುಗಳನ್ನು ಸೃಷ್ಟಿಸುವ ಶ್ರೀರಂಗ ಕ್ಷೇತ್ರದ ಅಧಿಪತಿಯಾದ ಶ್ರೀರಂಗನಾಥನು, ಶಂಖಚಕ್ರಧಾರಿಯಾಗಿ ಹುಡುಕಿಕೊಂಡು ಬಂದು ದಾಸನಿಗೆ ತನ್ನ ವಿಲಕ್ಷಣಗುಣಗಳನ್ನು ತೋರಿ ನಿನ್ನನ್ನು ಬಿಡೆನು ಎನ್ನುತ್ತಿರು

ವಾಗೈ, ಓ ರಾಮಾನುಜಾಚಾರ್ಯಸ್ವಾಮಿಯೇ! ನಿಮ್ಮ ಕಲ್ಯಾಣಗುಣಗಳೆಲ್ಲವೂ ನನ್ನ ಸುತ್ತಲೂ ನಿಂತು ಈ ದಾಸನನ್ನು ಆಶ್ರಮಿಸಿಕೊಂಡಿವೆ ಎನ್ನುತ್ತಾರೆ.

**ನಿನ್ರವಣ್ ಕೀರ್ತಿಯುಮ್ ನೀಳ್ ಪುನಲುಮ್,**
**ನಿರೈವೇಂಗಡಪ್ಪೊ**
**ಕುನ್ರಮುಮ್ ವೈಗುನ್ದನಾಡುಮ್**
**ಕುಲವಿಯಪಾರ್ಕಡಲುಮ್**
**ಉನ್ರನಕ್ಕೆತ್ತನೈ ಇನ್ಬನ್ತರುಮ್ ಉನ್ನಿಣೈ ಮಲರ್ತ್ತಾಳ್**
**ಎನ್ರನಕ್ಕುಮದು, ಇರಾಮಾನುಶಾವಿವೈಯೀನ್ದರುಳೇ.** 76

ನಿನ್ರ–ಸ್ಥಿರವಾಗಿರುವ ನಿನ್ನ, ವಣ್–ಮನೋಜ್ಞವಾದ, ಕೀರ್ತಿಯುಮ್–ಯಶಸ್ಸನ್ನೂ, ನೀಳ್–ದೀರ್ಘವಾದ (ಪ್ರವಹಿಸುತ್ತಿರುವ), ಪುನಲುಮ್–ನದಿಗಳನ್ನುಳ್ಳ, ನಿರೈ–ಪೂರ್ಣವಾಗಿರುವ, ವೇಂಗಡಮ್–ತಿರುವೇಂಗಡವೆಂಬ ಹೆಸರುಳ್ಳ, ಪೊನ್–ಸುಂದರವಾದ, ಕುನ್ರಮುಮ್–ತಿರುಮಲೆ ಎಂಬ ಪರ್ವತವನ್ನೂ, ವೈಕುನ್ದಮ್–ಶ್ರೀ ವೈಕುಂಠವನ್ನೂ, ನಾಡುಮ್–ಪರಮಪದವನ್ನೂ, ಕುಲವಿಯ–ಜ್ಞಾನವಂತರು ಸ್ತುತಿಸುವಂತ, ಪಾರ್ಕಡಲುಮ್–ಕ್ಷೀರಾಬ್ಧಿಯನ್ನೂ, ಉನ್ದನಕ್ಕು–ನಿಮ್ಮಗಳಿಗೆ (ರಾಮಾನುಜರಿಗೆ), ಎತ್ತನೈ–ಎಂತಹ, ಇನ್ಬಮ್–ಆನಂದವನ್ನು, ತರುಮ್–ಕೊಡುತ್ತದೆಯೋ, ಉನ್–ತಮ್ಮ ಯಾವ, ಇಣೈ–ಸುಂದರವಾದ, ಮಲರ್–ಪುಷ್ಪಗಳಂತೆ ಕೋಮಲವಾದ, ತಾಳ್–ಶ್ರೀಪಾದಗಳು, ಎನ್ ದನಕ್ಕುಮ್–ನನಗೆ, ಅದು–ಅಂತಹ ಆನಂದವನ್ನು (ಕೊಡುತ್ತವೆ), ಇರಾಮಾನುಶಾ–ಓ ರಾಮಾನುಜಾಚಾರ್ಯರೇ! ಇವೈ–ಈ ನಿಮ್ಮ ಪಾದಾರವಿಂದಗಳನ್ನು, ಈನ್ದರುಳ್–ದಾಸನಿಗೆ ಕರುಣೆಯಿಂದ ದಯಪಾಲಿಸಿ.

ಓ ರಾಮಾನುಜರೇ, ಸರ್ವಕಾಲಗಳಲ್ಲಿಯೂ ಮನೋಜ್ಞವಾಗಿ ದಿವ್ಯಗುಣ ಪ್ರಸಿದ್ಧಿಯಿಂದ ಸದಾ ಪ್ರವಹಿಸುತ್ತಿರುವ ನದಿಗಳಿಂದ ತುಂಬಿದ, ತಿರುವೇಂಗಡವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಶ್ರೀವೆಂಕಟಾಚಲವೂ, ಶ್ರೀವೈಕುಂಠವೂ, ಪರಮ ಪದವೂ, ಕ್ಷೀರಾಬ್ಧಿಯೂ, ತಮಗೆ ಎಂತಹ ಸೌಖ್ಯ ಆನಂದಗಳನ್ನು ಕೊಡುತ್ತವೆಯೋ, ಅಂತಹ ಸೌಖ್ಯವನ್ನೂ ಆನಂದವನ್ನೂ ಈ ದಾಸನಿಗೆ ತಮ್ಮ ಪಾದಾರವಿಂದಗಳು ಕೊಡುತ್ತವೆಯಾದುದರಿಂದ ಅಂತಹ ಪಾದಾರವಿಂದಗಳನ್ನು ಕೃಪೆಮಾಡಿ ಕರುಣಿಸಿ.

ಈನ್ದನನೀಂಯಾದವಿನ್ನರುಳ್, ಎಣ್ಣಿಲ್ ಮರೈಕ್ಕುರುವೈ್ಕ್
ಪಾಯ್ನ್ದನಸಮ್ಮರೈಪ್ಪಲ್ ಪೊರುಳಾಲ್, ಇಪ್ಪಡಿಯನೈತ್ತು
ಮೇಯ್ನ್ದನನ್ ಕೀರ್ತಿಯಿನಾಲೆನ್ ವಿನೈಗಳ್ವೇರ್ ಪರಿಯು
ಕ್ಕಾಯ್ನ್ದನನ್, ವಣ್ಮೈ ಯಿರಾಮಾನುಶರ್ಕೆನ್
ಕರುತ್ತಿನಿಯೇ. 77

ಈ ಯಾದ–(ಇದುವರೆಗೂ ಯಾರಿಗೂ) ತೋರದೆ ಇರುವ, ಇನ್ನರುಳ್–ವಿಲಕ್ಷಣವಾದ ಕೃಪೆಯನ್ನು, ಈನ್ದನನ್–ನನಗೆ ಉಪಕರಿಸಿಕೊಟ್ಟಿರುವರು, ಎಣ್ ಇಲ್–ಲೆಕ್ಕವಿಲ್ಲದ, ಮರೈ–ವೇದಗಳಲ್ಲಿನವಕ್ಕೆ, ಕುರುವೈ್ಕ–ತಪ್ಪು ಅರ್ಥ ಕಲ್ಪಿಸಿದ ಕುದೃಷ್ಟಿಯ ಮತದವರಿಗೆ, ಅ–ಆ, ಮರೈ–ವೇದಗಳಲ್ಲಿ (ಪ್ರತಿಪಾದಿಸಿರುವ), ಪಲ್ ಪೊರುಳಾಲ್–ಅನೇಕ ಅರ್ಥಗಳನ್ನು ತೋರಿ, ಪಾಯ್ನ್ದನನ್–ತಳ್ಳಿ ಧ್ವಂಸ ಗೊಳಿಸಿದರು, ಇ–ಈ, ಪಡಿಯನೈತ್ತುಮ್–ಭೂಮಿಯಲ್ಲೆಲ್ಲಾ, ಕೀರ್ತಿಯಿನಾಲ್–ಯಶಸ್ಸಿನಿಂದ, ಏಯ್ನ್ದನನ್–ವ್ಯಾಪಿಸಿಕೊಂಡವರಾದರು, ಎನ್–ನನ್ನ ಯಾವ, ವಿನೈಗಳ್–ಕರ್ಮಗಳ, ವೇರ್–ಮೂಲವನ್ನೇ (ಬೇರನ್ನೇ), ಪರಿಯ–ನಶಿಸುವಂತೆ (ಮಾಡಿ), ಕಾಯ್ನ್ದನನ್–ಉದ್ಧಾರಮಾಡಿದ, ವಣ್ಮೈ–ಪರಮೋದಾರಿಗಳಾದ, ಇರಾಮಾನುಶರ್ಕು–ರಾಮಾನುಜಾಚಾರ್ಯರಿಗೆ, ಇನಿ–ಇನ್ನು ಮೇಲೆ, ಕರತ್ತು–ಮತ್ತಾವ ಅಪೇಕ್ಷೆಯನ್ನು ತಮ್ಮ ಹೃದಯದಲ್ಲಿಟ್ಟುಕೊಂಡಿದ್ದಾರೋ, ಎನ್–ಏನಿರುವುದೋ.

ರಾಮಾನುಜಾಚಾರ್ಯರು, ಹಿಂದೆ ಯಾರಿಗೂ ಎಂದೂ ತೋರದಂತಹ ಅತಿಶಯವಾದ ಕೃಪೆಯನ್ನು ಈ ದಾಸನಲ್ಲಿ ತೋರಿರುವರು. ವೇದಗಳಿಗೆ ಅಪಾರ್ಥಕಲ್ಪಿಸುತ್ತಾ ಕುದೃಷ್ಟಿಯ ನೀಚವಾದಿಗಳನ್ನು, ವೇದಗಳಿಗೆ ಸರಿಯಾದ ಅರ್ಥವನ್ನು, ಅನೇಕಾರ್ಥಗಳನ್ನು ಮುಖ್ಯ ಪ್ರಮಾಣಗಳಿಂದ ಜಯಿಸಿ, ಭೂಮಂಡಲದಲ್ಲೆಲ್ಲಾ ತಮ್ಮ ಕೀರ್ತಿಯನ್ನು ವ್ಯಾಪಿಸಿದರು. ನನ್ನ ಪ್ರಗತಿಗೆ ಕುಂದಕವಾಗಿದ್ದ ನನ್ನ ಕರ್ಮಗಳೆಲ್ಲವನ್ನೂ ಸಮೂಲವಾಗಿ ನಾಶಮಾಡಿ ಉಪಕರಿಸಿರುವರುವ ಉದ್ಯೈಯವರು ಇನ್ನೂ ಉತ್ತಮವಾದುದಾವುದನ್ನು ನನಗೆ ಮಾಡಲು ಬಯಸಿರುವರೋ ? ತಿಳಿಯದು.

ಕರುತ್ತಿಪ್ಪುಗನ್ದುಳ್ಪುಕ್ಕಳ್ಳಂಗಳತ್ತಿ, ಕ್ಕರುದರಿಯ
ವರುತ್ತತ್ತಿನಾಲ್ ಮಿಗನಂಗಿತ್ತು, ನೀಯೆನ್ದವಣ್ಣಗತ್ತೇ
ತಿರುತ್ತಿತ್ತಿರುಮಗಳ್ ಕೇಳ್ವನುಕ್ಕಾಕ್ಕಿಯಪಿನ್ ಎನ್ನೆಂಗಿಲ್
ಪೊರುತ್ತಪ್ಪಡಾದು, ಎಮ್ಮಿರಾಮಾನುಶಮತ್ತೋರ್
ಪೊಯ್ಪ್ಪೊರುಳೇ. 78

ಇರಾಮಾನುಶಾ–ರಾಮಾನುಜರೇ, ನೀ–ನೀವು, ಕರುತ್ತಿಲ್–ಮನಸ್ಸಿನಲ್ಲಿ, ಪುಗುಂದು–ಪ್ರವೇಶಿಸಿ, ಉಳ್ ಇಲ್–ನನ್ನ ಮನಸ್ಸಿನಲ್ಲಿ ತುಂಬಿದ್ದ, ಕಳ್ಳಮ್–ಕಳ್ಳತನವನ್ನು (ನಾನು ನನ್ನದು ಎಂಬುದನ್ನು), ಕಳತ್ತಿ–ಕಳೆದು, ಕರುದು–ಊಹಿಸಲೂ, ಅರಿಯ–ಸಾಧ್ಯವಾಗದ, ವರತ್ತತ್ತಿನಾಲ್–ಪ್ರಯಾಸದಿಂದ, ಮಿಗ–ಹೆಚ್ಚಿನ, ವಂಗಿತ್ತು–(ತನ್ನ ಕಾರ್ಯವನ್ನು) ಕರುಣೆ, ಮರುಕದಿಂದಲೇ, ತಿರುತ್ತಿ–ತಿದ್ದಿ, ಇನ್ದ–ಈ, ಮಣ್ಣಗತ್ತೇ–ಭೂಲೋಕದಲ್ಲಿ, ತಿರುಮಗಳ್ ಕೇಳ್ವನುಕ್ಕು–ಶ್ರಿಯಃಪತಿಯಾದ ಸ್ವಾಮಿಗೆ, ಆಕ್ಕಿಯಪಿನ್–ದಾಸನನ್ನಾಗಿ ಮಾಡಿದ ಮೇಲೆ, ಎನ್ನೆಂಗಿಲ್–(ಈ ರೀತಿ ಪರಿವರ್ತನೆಯಾದ) ನನ್ನ ಮನಸ್ಸಿನಲ್ಲಿ, ಮತ್ತು ಒರ್–ಇತರ ಯಾವ ಒಂದೂ, ಪೊಯ್–ಅಸತ್ಯವಾದ, ಪೊರುಳ್–ಅರ್ಥವು, ಪೊರುತ್ತಪ್ಪಡಾದು–ಬಲವಂತವಾಗಿ ಹೊಂದುವಂತೆ ಮಾಡಿದರೂ ಹೊಂದುವುದಿಲ್ಲ.

ಓ ರಾಮಾನುಜಾಚಾರ್ಯರೇ, ತಾವು ನನ್ನನ್ನು ಉಪದೇಶಕ್ಕೆ ಮಣಿಯುವವನಲ್ಲ ಎಂದರಿತು ನನ್ನ ಹೃದಯವನ್ನು ಪ್ರವೇಶಿಸಿ, ಅಲ್ಲಿದ್ದ ನನ್ನ ದುರಭಿಮಾನವನ್ನೂ ಅನೇಕ ದೋಷಗಳನ್ನೂ ಧ್ವಂಸಮಾಡಿ, ಊಹಿಸಲೂ ಸಾಧ್ಯವಿಲ್ಲದ ಶ್ರಮದಿಂದಲೋ, ನನಗರಿಯದೆಯೋ, ನನ್ನನ್ನು ಶ್ರಿಯಃಪತಿಯ ಶೇಷಭೂತನನ್ನಾಗಿಸಿ ಅವನ ದಾಸನಾಗುವಂತೆ ಮಾಡಿದಿರಿ, ಇನ್ನುಮೇಲೆ ಅಹಂಕಾರ ಮಮಕಾರಾದಿ ದುರ್ಗುಣಗಳು ನನ್ನ ಅಂತಃಕರಣವನ್ನು ಸೇರವು, ಅವು ನನ್ನಲ್ಲಿ ನಿಲ್ಲವು.

**ಪೊಯ್ಯೈಚ್ಚುರಕ್ಕುಮ್ ಪೊರುಳೈತ್ತುರನ್ದು,**
**ಇನ್ದಪ್ಪೂದಲತ್ತೇ**
**ಮೆಯ್ಯೈಪ್ಪುರಕ್ಕು ಮಿರಾಮಾನಶನಿರ್ಕ, ವೇರುನಮ್ಮೈ**
**ಯುಯ್ಯ ಕೊಳ್ಳವಲ್ಲದೆಯ್‌ವಮಿಂಗಿಯಾದೆನ್ರುಲರ್‌ನ್ದವಮೋ**
**ಐಯಪ್ಪಡಾನಿರ್ಪರ್, ವೈಯತ್ತುಳ್ಳೋರ್ ನಲ್ಲರಿವಿಳಂದೇ. 79**

ಪೊಯ್ಯೈ–ಅಸತ್ಯವನ್ನು, ಶುರಕ್ಕುಮ್–ಮೇಲಿಂದ ಮೇಲೆ ಪ್ರತಿಪಾದಿಸುತ್ತಲಿದ್ದ, ಪೊರುಳೈ–ಬಾಹ್ಯಕುದೃಷ್ಟಿಮತಸ್ಥರ ಬಗೆ ಬಗೆಯ ಅರ್ಥಗಳನ್ನು, ತುರನ್ದು–ತರಿದು, ಇಂದ–ಈ, ಪೂದಲತ್ತೇ–ಭೂಮಿಯಲ್ಲೆಲ್ಲಾ, ಮೆಯ್ಯೈ–ಯಥಾರ್ಥವನ್ನು, ಪುರಕ್ಕುಮ್–ಕಾಪಾಡಿದ, ಇರಾಮಾನುಶನ್–ರಾಮಾನುಜರು, ನಿರ್ಕ–ಇರಬೇಕಾದರೆ, ವೇರು–ಬೇರೊಬ್ಬರು, ನಮ್ಮೈ–ನಮ್ಮಲ್ಲಿ, ಉಯ್ಯಕ್ಕೊಳ್ಳವಲ್ಲ–ಜ್ಞಾನೋದಯವನ್ನು ಕರುಣಿಸಿ ಕಾಪಾಡುವ, ತೆಯ್‌ವಮ್–ದೇವತೆಯು, ಇಂಗು–ಇಲ್ಲಿ, ಯಾದುವೆನ್ರು–ಯಾವುದೆಂದು, ಉಲರ್‌ನ್ದು–ಮನೋವ್ಯಥೆಯಿಂದ, ಎಂಡಿ–ನವೆದು, ನಲ್ ಅರಿವು–ಯಥಾರ್ಥ ಜ್ಞಾನವನ್ನು, ಇಳಂದು–ಪಡೆಯದೆ

ಇರುವಾಗ, ವೈಯತ್ತಿಳ್ಳೋರ್–ಭೂಮಿಯಲ್ಲಿರುವವರು, ಅವಮೇ–ಒಂದೂ ಪ್ರಯೋಜನವನ್ನು ಹೊಂದದೆ, ಐಯಪ್ಪಡಾನಿರ್ಪರ್–ಸಂದೇಹ ಪಡುತ್ತಿರುವವರು.

ಮತ್ತೊಂದು ಅರ್ಥ ಹೀಗೆ ಇರುವುದು :— ಪೊಯ್ಯೈ–(ಅಸತ್ಯ ಶಬ್ದದಿಂದ ಹೇಳಲ್ಪಡುವ) ಅಸ್ಥಿರವಾದ ದೇಹವನ್ನು, ಶುರಕ್ಕುಮ್–ಜನ್ಮಜನ್ಮಾಂತರಗಳಿಂದ ಬೆಳೆದು ಬಂದ, ಪೊರುಳೈ–ದೇಹಾತ್ಮಾಭಿಮಾನ, ಸ್ವಸ್ವಾತಂತ್ರ್ಯವೇ ಮೊದಲಾದ ಅರ್ಥಗಳನ್ನು, ತುರನ್ದು–ತನ್ನ ಒಂದು ಉಪದೇಶದಿಂದಲೇ ದಾರಿಶೋರಿ, ಮೆಯ್ಯೈ–ಯಾವ ವಿಕಾರವನ್ನೂ ಹೊಂದದ ಆತ್ಮಸ್ವರೂಪವನ್ನು, ಪುರಕ್ಕುಮ್–ಕಾಪಾಡುವಂತಹ, ರಾಮಾನುಜರು (ಉಳಿದುದನ್ನು ಮೇಲಿನಂತೆಯೇ ತಿಳಿಯ ತಕ್ಕದ್ದು).

ಈ ಭೂಲೋಕದಲ್ಲಿ ದುರ್ಮತಸ್ಥರ ನಾಸ್ತಿಕವಾದವನ್ನು ಖಂಡಿಸಿ, ಆಸ್ತಿಕ್ಯ ವನ್ನೂ ಕಾಪಾಡಿದ ರಾಮಾನುಜರು ಎದುರಿಗೇ ಇದ್ದರೂ ಗುರುತಿಸದೆ ಜನಗಳು ತಮ್ಮನ್ನು ಉದ್ಧಾರ ಮಾಡಲು ಬೇರೆ ಯಾವುದೋ ದೇವರು ಇರುವುದೇ ಎಂದು ಚಿಂತಿಸುತ್ತಾ ಕ್ಷೀಣವಾಗುತ್ತಿರುವರಲಾ! ಶ್ರೀಮದ್ರಾಮಾನುಜರ ಚರಣವೇ ಶರಣವು ಎಂಬ ಉತ್ತಮ ಜ್ಞಾನ ರಹಿತರಾಗದೆ ಸಂದೇಹಿಸುತ್ತಾ ಹಾಳಾಗುತ್ತಿರುವರಲ್ಲಾ, ಅಯ್ಯೋ! ಎನ್ನುತ್ತಾರೆ.

**ನಲ್ಲಾರ್ ಪರವುಮಿರಾಮಾನುಶನ್, ತಿರುನಾಮಮ್ ನಂಬ**
**ವಲ್ಲಾರ್ ತಿರತ್ತೈ ಮರವಾದವರ್‌ಗಳ್ ಯವರ್, ಅವರ್ಕ್ಕೇ**
**ಯೆಲ್ಲಾವಿಡತ್ತಿಲುಮೆನ್ರುಮೆಪ್ಪೋದಿಲು ಮೆತ್ತೊಳುಂಬುಮ್**
**ಶೊಲ್ಲಾಲ್ ಮನತ್ತಾಲ್, ಕರುಮತ್ತಿನಾಲ್**
**ಶೆಯ್‌ವನ್ ಶೋರ್ವಿನ್ರಿಯೇ.** 81

ನಲ್ಲಾರ್–ಸಜ್ಜನರೆಲ್ಲರೂ, ಪರವುಮ್–ಕೊಂಡಾಡುವ, ಇರಾಮಾನುಶನ್–ರಾಮಾನುಜಾಚಾರ್ಯರ, ತಿರುನಾಮಮ್–ಸಕಲ ಸಂಪತ್ಕರವಾದ ಹೆಸರನ್ನು, ನಂಬವಲ್ಲಾರ್–ನಂಬಿದವರ, ತಿರತ್ತೈ–ವಿಧವನ್ನು, ಮರವಾದವರ್‌ಕಳ್–ಯಾವಾಗಲೂ ಅನುಸಂಧಾನ ಮಾಡುವವರು, ಯವರ್–ಯಾರೋ, ಅವರ್ಕ್ಕೇ–ಅವರಿಗೆ, ಎಲ್ಲಾವಿಡತ್ತಿಲುಮ್–ಎಲ್ಲ ದೇಶದಲ್ಲೂ, ಎನ್ರುಮ್–ಎಲ್ಲ ಕಾಲದಲ್ಲೂ, ಎಪ್ಪೋದಿಲುಮ್–ಎಲ್ಲ ಸಮಯದಲ್ಲೂ, ಎತ್ತೊಳುಂಬುಂ–ಸಕಲ ವಿಧ ಕೈಂಕರ್ಯ ವನ್ನು, ಶೊಲ್ಲಾಲ್–ಮಾತಿನಿಂದಲೂ, ಮನತ್ತಾಲ್–ಮನಸ್ಸಿನಿಂದಲೂ, ಕರುಮತ್ತಿನಾಲ್–ದೇಹದಿಂದಲೂ, ಶೋರ್ವಿನ್ರಿ–ವಿಶ್ಲೇಷವಿಲ್ಲದೆ (ವಿಚ್ಛೇದವಿಲ್ಲದೆ), ಶೆಯ್‌ವನ್–ಮಾಡುವೆನು.

ಸುಜನರಿಂದ ಯಾವಾಗಲೂ ಸ್ತೋತ್ರ ಮಾಡಿಸಿಕೊಳ್ಳಲ್ಪಡತಕ್ಕ ರಾಮಾನುಜಾಚಾರ್ಯರ, ತಿರುನಾಮಗಳೇ ನಮಗೆ ರಕ್ಷಕವೆಂದು ನಂಬಿರುವ ಮಹಾತ್ಮ ರಲ್ಲಿ, ಅತ್ಯಂತ ಸ್ನೇಹವುಳ್ಳವರಾಗಿ, ಎಲ್ಲ ಕಾಲದಲ್ಲಿಯೂ ಅವರ ದಿವ್ಯ ಗುಣಗಾನ ಮಾಡುವರು ಯಾರೋ, ಅಂತಹ ಭಾಗವತೋತ್ತಮರಿಗೇ, ನಾನು ಸರ್ವದೇಶ, ಸರ್ವಕಾಲ, ಸರ್ವಸಮಯಗಳಲ್ಲೂ, ಸಕಲವಿಧ ಕೈಂಕರ್ಯಗಳನ್ನೂ, ಮನೋ ವಾಕ್ಕಾಯಾದಿ ಸಕಲ ಇಂದ್ರಿಯಗಳ ಮೂಲಕ ತಪ್ಪದೆ ಮಾಡುತ್ತೇನೆ.

**ಶೋರ್ವಿನ್ರಿಯುನ್ರನ್ ತುಣ್ಣೈಯಡಿಕ್ಕೀಳ್,**
**ತ್ತೊಂಡುಪಟ್ಟವರ್ ಪಾಲ್**
**ಶಾರ್ವಿನ್ರಿ ನಿನ್ರವೆನಕ್ಕು, ಅರಂಗನ್ ಶೆಯ್ಯತಾಳಿಣೈಗಳ್**
**ಪೇರ್ವಿನ್ರಿಯಿನ್ರು ಪೆರುತ್ತು ಇರಾಮಾನುಶವಿನಿಯುನ್**
**ಶೀರೊನ್ರಿಯ ಕರುಣೈಕ್ಕು, ಇಲ್ಲೈಮಾರುತೆರಿವುರಿಲೇ. 81**

ಶೋರ್ವುಯಿನ್ರಿ–ಬೇರೊಂದು ವಿಷಯದಲ್ಲಿ ಮನಸ್ಸು ಹೊರಳದಂತೆ, ಉನ್ ದನ್–ತಾವೇ, ತುಣ್ಣೈ–ಕೂಡಿರುವ, ಅಡಿಕ್ಕೀಳ್–ತಮ್ಮ ಅಡಿಗಳಲ್ಲಿ, ಕೊಂಡುಪಟ್ಟವರ್ ಪಾಲ್–ದಾಸ್ಯವನ್ನು ಹೊಂದಿದವರ ವಿಷಯದಲ್ಲಿ, ಶಾರ್ವುಇನ್ರಿ–ಹೊಂದಿಕೆ ಇಲ್ಲದೆ, ನಿನ್ರ–ಇರುವ, ಎನಕ್ಕೂ–ನನಗೆ, ಅರಂಗನ್–ಶ್ರೀರಂಗನಾಥನ, ಶೆಯ್ಯ–ಶ್ಲಾಘ್ಯವಾದ ಕೆಂಪಾದ ಬಣ್ಣದಿಂದ, ಇಣೈ–ಸೇರಿರುವ, ತಾಳ್ ಕಳ್–ಶ್ರೀಪಾದಗಳನ್ನು, ಪೇರ್ವುಯಿನ್ರಿ–ಎಂದೂ ಬಿಡದಂತೆ, ಇನ್ರು–ಈಗ, ಪೆರುತ್ತುಮ್–ಲಭಿಸುವಂತೆ ಮಾಡಿದ, ಇರಾಮಾನುಶಾ–ರಾಮಾನುಜರೇ!, ಇನಿ–ಹೀಗಾದಮೇಲೆ, ಉನ್–ತಮ್ಮ, ಶೀರ್ ಒನ್ರಿಯ–ಮಹತ್ವದಿಂದ ಕೂಡಿರುವ, ಕರುಣೈ–ಕೃಪೆಗೆ, ತೆರವುಉರಿಲ್–ಆಲೋಚಿಸಿದರೆ, ಮಾರು–ಸಮಾನವು, ಇಲ್ಲೈ–ಇಲ್ಲವು.

ಓ ರಾಮಾನುಜಾಚಾರ್ಯರೇ! ಮಹಾತ್ಮರಾದ ತಮ್ಮಲ್ಲಿ ಶೇಷಭೂತರಾಗಿರುವವರ ವಿಷಯದಲ್ಲಿ ದಾಸನಾಗಲು ಸಮ್ಮತಿಸದೆ ಇರುವ ನನಗೆ, ಶ್ರೀರಂಗನಾಥನು ತನ್ನ ಪಾದಾಶ್ರಯವನ್ನು ಕೊಡದೆ ಇರುವ ಕಾಲದಲ್ಲಿ, ತಾವು ಅಂತಹ ಮಹಾ ಪ್ರಭಾವ ಶಾಲಿಗಳಾಗಿ ತಮ್ಮ ಭಕ್ತರಲ್ಲಿ ದಾಸನಿಗೆ ಪ್ರಾವಣ್ಯದೊರಕುವಂತೆ ಅನುಗ್ರಹಿಸಿದಿರಿ. ಈಗ ಶ್ರೀರಂಗನಾಥನು ತನ್ನ ಕೆಂದಾವರೆಯಂತಿರುವ ಶ್ರೀಪಾದಗಳನ್ನು ಸದಾಕಾಲವೂ ನನ್ನ ಹೃದಯ ಮಂದಿರದಲ್ಲಿ ಸ್ಥಾನಪಡೆದಿರುವಂತೆ ಅನುಗ್ರಹಿಸಿರುವನು. ಈ ರೀತಿ ಪರಮಾತ್ಮನ ಪಾದಾರವಿಂದಗಳಲ್ಲಿ ನನ್ನನ್ನು ಸೇರಿಸಿದ ತಮ್ಮ ಕೃಪಾನುರಾಗವನ್ನು ಸಾಟಿಯಿಲ್ಲದುದೆಂದು ತಿಳಿದಿರುವೆ.

ಮತ್ತೊಂದು ರೀತಿಯ ಅನ್ವಯ :—

ಭಗವತ್ ಶೇಷತ್ವವನ್ನು ಅಂಗೀಕರಿಸಿ, ಶ್ರೀರಂಗನಾಥನ ಪಾದಾರವಿಂದಗಳನ್ನು ಸದಾ ಆಶ್ರಯಿಸಿ ಸ್ಮರಿಸುತ್ತಿರುವ ಭಾಗವತರ ಮಹಿಮೆಯನ್ನು, ಗರ್ವದಿಂದ (ನಾನು) ತಿಳಿಯಲಾರದೆ ಭಗವದ್ಭಕ್ತರನ್ನು ಸಾಮಾನ್ಯರೆಂದೆಣಿಸಿ ಅವರೊಡನೆ ಸೇರದೆ ಇದ್ದ ನನಗೆ ಅವರಲ್ಲಿ ಪ್ರಾವಣ್ಯವನ್ನುಂಟುಮಾಡಿದ, ತಮ್ಮ ಮಹಿಮಾ ವಿಶೇಷದ ಕೃಪೆಯನ್ನು ಸಾಟಿಯಿಲ್ಲದೆಂದರಿತೆನು.

**ತೆರವುತ್ತ ಜ್ಞಾನಮ್ ಶೆರಿಯಪ್ಪೆರಾದು, ವೆನ್ದೀವಿನ್ಯೆಯಾಲ್**
**ಉರುವತ್ತ ಜ್ಞಾನತ್ತುಳಲ್ಗಿನ್ರವೆನ್ನೈ, ಒರುಪೊಳುದಿಲ್**
**ಪೊರುವತ್ತ ಕೇಳ್ವಿಯನಾಕ್ಕಿ ನಿನ್ರಾನೆನ್ನಪುಣ್ಣಿಯನೋ**
**ತೆರಿವುತ್ತ ಕೀರ್ತಿ, ಇರಾಮಾನುಶನೆನ್ನುಮ್ ಶೀರ್ಮುಗಿಲೇ.** 82

ತೆರಿವು–ಒಳ್ಳೆಯದು ಕೆಟ್ಟದೆಂಬುದನ್ನು ವಿವೇಚಿಸುವಲ್ಲಿ, ಉತ್ತ–ಹೊಂದಿರುವ, ಜ್ಞಾನಮ್–ಜ್ಞಾನವನ್ನು, ಶೆರಿಯ–ಹೊಂದುವುದಕ್ಕೆ, ಪೇರಾದು–ಹೊಂದದೆ, ವೆನ್ ತೀ–ಅತ್ಯಂತ ಕ್ರೂರವಾದ, ವಿನ್ಯೆಯಾಲ್–ಕರ್ಮಗಳಿಂದ, ಉರವುಅತ್ತ–ಒಂದು ವಸ್ತುರೂಪವನ್ನು ಹೊಂದದೆ ಇದ್ದ, ಜ್ಞಾನತ್ತು–ಜ್ಞಾನದಿಂದ, ಉಳ್ಗಿನ್ರ–ಯಾವುದರಲ್ಲೂ ಸ್ಥಿರತೆ ಇಲ್ಲದೆ ಅಲೆಯುತ್ತಿದ್ದ, ಎನ್ನೈ–ನನ್ನನ್ನು, ಒರುಪೊಳುದಿಲ್–ಒಂದೇ ಕ್ಷಣದಲ್ಲಿ, ಪೊರುವತ್ತು–ಎಣೆ ಇಲ್ಲದ, ಕೇಳ್ವಿಯನ್–(ಪ್ರಪತ್ತಿಯ ಉಪದೇಶವನ್ನು) ಕೇಳುವಂತೆ, ಅಕ್ಕಿ–ಮಾಡಿ, ನಿನ್ರಾಲ್–ಭೂಮಿಯಲ್ಲಿ ಅವತರಿಸಿ, ತೆರಿವು ಉತ್ತ–ಪ್ರಕಾಶ ಹೊಂದಿದ, ಕೀರ್ತಿ–ಪ್ರಖ್ಯಾತಿಯಿಂದಲೂ, ಶೀರ್ ಮುಗಿಲೆನ್ನುಮ್–ಉನ್ನತ ಉದಾರಿಯಾದ ಮೇಘದಂತೆ, ಇರಾಮಾನುಶನ್–ರಾಮಾನುಜಾಚಾರ್ಯರು, ಎನ್ನ ಪುಣಿಯನೋ–ಎಷ್ಟು ಪುಣ್ಯವಂತರೋ ?

ಸಾಂಸಾರಿಕ ಪ್ರವೃತ್ತಿಯಲ್ಲಿ ಮಗ್ನವಾಗಿ, ಉತ್ತಮವಾದ ಜ್ಞಾನವೊಂದೂ ದೊರೆಯದೆ, ಹೆಚ್ಚಿನ ದುಷ್ಕೃತ್ಯಗಳಿಂದಲೂ, ದೇಹವೇ ಆತ್ಮವೆಂಬ ಅವಿವೇಕ ಜ್ಞಾನದಿಂದಲೂ, ಸ್ಥಿಮಿತದಲ್ಲಿಲ್ಲದ ನನ್ನನ್ನು ಕ್ಷಣಮಾತ್ರದಲ್ಲಿ, ಸಕಲ ಸಂದೇಹಗಳಿಂದಲೂ ನಿವಾರಿಸಿ, ತತ್ವ, ಹಿತ, ಪುರುಷಾರ್ಥಗಳನ್ನು ಸ್ಪಷ್ಟವಾಗಿ ತಿಳಿಯುವಂತೆ ಮಾಡಿ ಪ್ರಸನ್ನನಾಗುವಂತೆ ಮಾಡಿದ, ಮೇಘದಂತೆ ಸರ್ವಸಮತೋದಾರಭಾವನೆಯುಳ್ಳ ರಾಮಾನುಜಾಚಾರ್ಯರ ಉಪಕಾರ ಸ್ವಭಾವವನ್ನು ಸ್ತುತಿಸಲು ನಾನು ಅರ್ಹನೇ ?

**ಶೀರ್‌ಕೊಂಡುಪೇರರಂಗೆಯ್‌ದು,**
**ನಲ್‌ವೀಡು ಶೆರಿದುಮೆನ್ನುವರ್**

**ಪಾರ್‌ಕೊಂಡ ಮೇನ್ಮೈಯರ್ ಕೂಟ್ಟನಲ್ಲೇನ್,**
**ಉನ್‌ಪದಯುಗಮಾವರ್**

**ಏರ್‌ಕೊಂಡ ವೀಟ್ಟೈಯೆಳಿದಿನಿಲೆಯ್‌ದುವನ್ ಉನ್ನುಡೈಯ**

**ಕಾರ್‌ಕೊಂಡವಣ್ಮೈ, ಯಿರಾಮಾನುಶಾವಿದು**
**ಕಂಡುಕೊಳ್ಳೇ. 83**

ಶೀರ್–(ಶಮ ದಮಾದಿ ಆತ್ಮ) ಗುಣಗಳನ್ನು, ಕೊಂಡು–ಹೊಂದಿರುವ, ಪೇರರಮ್–ಪರಮ ಧರ್ಮವಾದ ಪ್ರಪತ್ತಿಯನ್ನು, ಶೆಯ್‌ದು–ಮಾಡಿ, ನಲ್–ಪರಮಪುರುಷಾರ್ಥ ಲಕ್ಷಣವಾದ, ವೀಡು–ಮೋಕ್ಷವನ್ನು, ಶೆರಿದುಮ್–ಹೊಂದೋಣ, ಎನ್ನುವರ್–ಅಂತಹ ನಿಷ್ಠೆಯುಳ್ಳವರಿಂದ, ಪಾರ್‌ಕೊಂಡ–ಭೂಮಿಯಲ್ಲೆಲ್ಲಾ ವ್ಯಾಪಿಸುವಂತೆ ಮಾಡಿದ, ಮೇನ್ಮೈಯರ್–ಮಹಿಮಾವಂತ ಭಾಗವತರ, ಕೂಟ್ಟನ್–ಗೋಷ್ಠಿಯಲ್ಲಿ ಸೇರಿದವನು, ಅಲ್ಲೇನ್–ಅಲ್ಲವು, ಇರಾಮಾನುಶಾ–ರಾಮಾನುಜಾಚಾರ್ಯರೇ! ಉನ್–ತಮ್ಮ, ಪದಯುಗಮಾವರ್–ಶ್ರೀಪಾದಯುಗಳಲ್ಲೀಗ, ಏರ್‌ಕೊಂಡ–ಸರ್ವವಿಲಕ್ಷಣವಾದ, ವೀಟ್ಟೈ–ಪರಮಪದವನ್ನು, ಎಳಿದಿನಿಲ್–ಆಯಾಸವಿಲ್ಲದೆಲೇ, ಎಯ್‌ದುವನ್–ಹೊಂದಿದೆನು (ಅದಕ್ಕೆ ಕಾರಣ), ಕಾರ್‌ಕೊಂಡ–(ಸಕಲವಿಧದಲ್ಲೂ ಉಪಕಾರ ಮಾಡುವಂತ) ಮೇಘವನ್ನೇ ಜಯಿಸಿದ, ಉನ್‌ಉಡೈಯ–ತಮ್ಮ ಯಾವ, ವಣ್ಮೈ–ಉದಾರತೆಯನ್ನು, ಇದು–ಇದನ್ನು, ಕಂಡುಕೊಳ್–ತಿಳಿದುಕೊಳ್ಳುವುದು.

ಶಮ ದಮಾದಿ ಅಕಿಂಚನ್ಯ ಅನನ್ಯ ಗತಿತ್ವರುಚಿ ವಿಶ್ವಾಸರೂಪ ಸಮಸ್ತ ಮುಕ್ತಾತ್ಮ ಗುಣಸಂಪನ್ನರಾಗಿ ಸ್ವರೂಪಾನುರೂಪದಲ್ಲಿ ಪ್ರಪತ್ತಿಯೆಂಬ ಉಪಾಯವನ್ನು ಅನುಸರಿಸಿ, ನಿಸ್ಸಂಶಯದಿಂದ ಮೋಕ್ಷಪ್ರಾಪ್ತಿಗೆ ಅರ್ಹರಾದ, ಜಗತ್ತಿನಲ್ಲೆಲ್ಲಾ ತುಂಬಿರುವ ಮಹಿಮಾತಿಶಯವನ್ನು ಹೊಂದಿದ ಪ್ರಥಮಪರ್ವಕ್ಕಿಂತಲೂ ಅತಿಶಯವಾದ ರಾಮಾನುಜರ ಶ್ರೀಪಾದ ದ್ವಯಗಳಿಂದಲೇ ವಿಲಕ್ಷಣವಾದ ಮೋಕ್ಷವನ್ನು, ಅವರ ಯಾವ ನಿರ್ಹೇತುಕ ಕೃಪೆಯಿಂದಲೇ ನಾನು ಪಡೆದಿರುವೆನೆಂಬುದನ್ನು ನನ್ನ ಅನುಭವದಿಂದಲೇ ಅರಿತಿರುವೆನು.

**ಕಂಡುಕೊಂಡೇನೆಮ್ಮಿರಾಮಾನುಶನ್ ತನ್ನೈ, ಕಾಂಡಲುಮೇ**
**ತೊಂಡುಕೊಂಡೇನವನ್ ತೊಂಡರ್‌ಪೊತ್ತಾಳಿಲ್,**
**ಎನ್‌ತೊಲ್ಲೈವೆನ್ನೋಯ್**
**ವಿಂಡುಕೊಂಡೇನವನ್ ಶೀರ್‌ವೆಳ್ಳವಾರಿಯೈ**
**ವಾಯ್‌ಮಡುತ್ತಿನ್ರು**
**ಕೊಂಡೇನ್, ಎನ್ನಮುತ್ತನಪೋದಿಲುಲಪ್ಪಿಲ್ಲೈಯೇ.** 84

ಎನ್–(ನಮ್ಮನ್ನು ಉದ್ಧರಿಸುವಂತಹ) ಸ್ವಾಮಿಯಾದ, ಇರಾಮಾನುಶನ್ ತನ್ನೈ–ರಾಮಾನುಜಾಚಾರ್ಯರನ್ನು, ಕಂಡುಕೊಂಡೇನ್–(ಯಥಾ ಸ್ಥಿತಿಯಲ್ಲಿ) ಕಂಡುಕೊಂಡೆನು, ಕಾಂಡಲುಮ್–ಈ ರೀತಿ ಕಂಡುಕೊಂಡೊಡನೆಯೇ (ಅವರನ್ನೇ ಅಲ್ಲದೆ), ಅವನ್‌ತೊಂಡರ್–ಅವರ ದಾಸರ, ಪೊನ್–ರಮ್ಯವಾದ, ತಾಳಿಲ್–ಶ್ರೀಪಾದಗಳಂದು, ತೊಂಡುಕೊಂಡೇನ್–ಕೈಂಕರ್ಯವನ್ನು ಕೈಗೊಂಡೆ, ಎನ್–ನನ್ನ, ತೊಲ್ಲೈ–ಪುರಾತನವಾದ, ವೆಮ್–ಹೆಚ್ಚಿನ ಕ್ರೂರವಾದ, ನೋಯ್–ಕರ್ಮಗಳನ್ನು, ವಿಂಡುಕೊಂಡೇನ್–ನಿವಾರಿಸಿಕೊಂಡೆನು, ಅವನ್–ಆ ಯತಿರಾಜರ, ಶೀರ್–ದಿವ್ಯ ಗುಣಗಳಲ್ಲಿ, ವೆಳ್ಳಮ್–ಪ್ರವಾಹರೂಪವಾಗಿ, ವಾರಿಯೈ–ಸಮುದ್ರವನ್ನು, ವಾಯ್‌ಮಡುತ್ತು–(ಅಧಿಕ ಅಪೇಕ್ಷೆಯಿಂದ) ಬಾಯನ್ನು ತೆರೆದು, ಇನ್ರು–ಈಗ, ಉಂಡುಕೊಂಡೇನ್–ಭುಜಿಸಿದವನಾಗಿದ್ದೇನೆ, ಇನ್ನುಮ್–ಇನ್ನುಮೇಲೆ, ಉತ್ತನ–ನಾನು ಪಡೆದಿರುವ ಭಾಗ್ಯವನ್ನು, ಓದಿಲ್–ಹೇಳುವುದಕ್ಕೆ (ವಿವರಿಸುವುದಕ್ಕೆ), ಉಲಪ್ಪು ಇಲ್ಲೈ–ಸಮಾಪ್ತಿ ಮಾಡುವುದಕ್ಕೆ ಆಗುವುದೇ ಇಲ್ಲ.

ನನಗೆ ಪ್ರಾಪ್ತ ಶೇಷಿಯಾದವರು ರಾಮಾನುಜಾಚಾರ್ಯರು, ಅವರನ್ನು, ಕಣ್ತುಂಬ ನೋಡಿ, ಸೇವಿಸಿದ ಆನಂದವು ಭಾಗವತರೆಲ್ಲರಲ್ಲೂ ವೃದ್ಧಿಹೊಂದುತ್ತಿರುವಾಗ, ಆ ಭಾಗವತರ ಪಾದಾರವಿಂದಗಳಲ್ಲಿ ಶೇಷಭೂತನಾಗಿ, ಅತಿಕ್ರೂರವಾದ ನನ್ನ ಪೂರ್ವಾರ್ಜಿತ ದುಷ್ಕರ್ಮಗಳನ್ನು ನಿವಾರಿಸಿಕೊಂಡಿರುವೆನು. ಅವರ ಯಾವ ಕಲ್ಯಾಣಗುಣಗಳೆಂಬ ಸಮುದ್ರವನ್ನೇ ಬಾಯ್ತೆರೆದು ಒಲವಿನಿಂದ ಭುಜಿಸಿರುವೆನು. ನನಗೆ ಲಭಿಸಿರುವ ಈ ಭಾಗ್ಯವನ್ನು ಎಷ್ಟು ಹೇಳಿದರೂ ಮುಗಿಯದು.

**ಓದಿಯ ವೇದತ್ತಿನುಟ್ಪೊರುಳಾಯ್, ಅದನುಚ್ಚಿಮಿಕ್ಕ**
**ಶೋದಿಯೈನಾದನೆನವರಿಯಾದುಳಲ್‌ಗಿನ್ರತೊಂಡರ್**
**ಪೇದೈಮೈತೀರ್ತವಿರಾಮಾನುಶನೈತ್ತೊಳುಮ್ ಪೆರಿಯೋರ್**
**ಪಾದಮಲ್ಲಾಲೆನ್ರನ್ನಾರುಯಿರ್ಕರ್,**
**ಯಾದೊನ್ರುಮ್ ಪತ್ತಿಲ್ಲೈಯೇ.** 85

ಓದಿಯ–ತಾವು ಅಧ್ಯಯನ ಮಾಡಿದ, ವೇದತ್ತಿನ್–ವೇದಗಳ, ಉಳ್– ಅಂತರಾರ್ಥವನ್ನು, ಪೊರುಳಾಯ್–ಸರ್ವಾರ್ಥವನ್ನೂ, ಅದನ್‌ಉಚ್ಚಿ–ಅದರ ಶಿರೋಭಾಗವೆನಿಸಿದ ವೇದಾಂತ ಭಾಗವಾದ ಉಪನಿಷತ್ತುಗಳಲ್ಲಿ, ಮಿಕ್ಕ–ಸರ್ವಾ ತಿಶಯವಾಗಿ, ಶೋದಿಯೈ–ಪ್ರಕಾಶಿಸುತ್ತಿರುವ ಶ್ರಿಯಃಪತಿಯನ್ನು, ನಾದನ್‌ಎನ– ನಮಗೆ ಸ್ವಾಮಿಯೆಂದು, ಅರಿಯಾದು–ತಿಳಿಯದ, ಉಳಲ್–ಶರಣುಬಂದವರಿಗೆ, ಪೇದೈಮೈ–ಅಜ್ಞಾನವನ್ನು, ತೀರ್ತ–ಹೋಗಲಾಡಿಸಿದ, ಇರಾಮಾನುಶನೈ– ರಾಮಾನುಜಾಚಾರ್ಯರನ್ನು, ತೋಳುಮ್–ಆಶ್ರಯಿಸಿರುವ, ಪೆರಿಯೋರ್–ಮಹಿಮೆ ಯುಳ್ಳ ಪ್ರಪನ್ನರ, ಪಾದಮ್ ಅಲ್ಲಾಲ್–ಶ್ರೀಪಾದಗಳನ್ನು ಬಿಟ್ಟು, ಎನ್ರನ್ ಆರುಯಿರ್ಕ್ಕು–ನನ್ನ ಆತ್ಮಕ್ಕೆ, ಯಾದೊನ್ರುಮ್–ಬೇರೆ ಯಾವುದಾದರೊಂದು, ಪತ್ತು–ಆಶ್ರಯವು, ಇಲ್ಲೈ–ಇಲ್ಲವು.

ವೇದಾಂತಗಳಾದ ಉಪನಿಷತ್ತುಗಳಲ್ಲಿಯೂ ವಿಶದವಾಗಿ ಹೇಳಿರುವ ಸಕಲ ವೇದ ಪ್ರತಿಪಾದ್ಯನಾದ ಶ್ರಿಯಃಪತಿಯೇ, ನಮಗೆ ಸರ್ವಸ್ವಾಮಿಯೆಂದು ತಿಳಿದು ಕೊಳ್ಳದೆ, ವಿಷಯಾಸಕ್ತಿಹೊಂದಿ ದುಃಖವನ್ನು ಅನುಭವಿಸುತ್ತಿದ್ದ ಸಂಸಾರಿಗಳ ಅಜ್ಞಾನವನ್ನು ಹೋಗಲಾಡಿಸಿದ, ಪರಮ ಕೃಪಾಸ್ವರೂಪರಾದ ರಾಮಾನುಜಾ ಚಾರ್ಯರ ಶೇಷಭೂತರಾದ ಮಹಿಮಾವಂತ ಪ್ರಪನ್ನರ ಶ್ರೀಪಾದಗಳನ್ನು ಬಿಟ್ಟು ನನ್ನ ಆತ್ಮಕ್ಕೆ ಮತ್ತಾವ ಆಶ್ರಯವೂ ಇಲ್ಲ ಎಂಬುದನ್ನು ಖಚಿತವಾಗಿ ಅರಿತಿರುವೆನು.

**ಪತ್ತಾಮನಿಶರೈಪತ್ತಿ, ಯಪ್ಪತ್ತುವಿಡಾದವರೇ**
**ಉತ್ತಾರೆನವುಳನ್ರೋಡಿನೈಯೇನಿನಿ, ಒಳ್ಳಿಯನೂಲ್**
**ಕತ್ತಾರ್‌ಪರವುಮಿರಾಮಾನುಶನೈಕ್ಕರುದುಮುಳ್ಳಮ್**
**ಪೆತ್ತಾರ್‌ಯವರ್, ಅವರೆಮ್ಮೈನಿನ್ರಾಳುಮ್ ಪೆರಿಯವರೇ.** 86

ಪತ್ತಾ–ಅನುಕೂಲವಿಲ್ಲದ (ಆಪತ್ತು ಸಂಪತ್ತುಗಳಿಗೆ) ಮನಿಶರೈ–ಮನುಷ್ಯ ರನ್ನು, ಪತ್ತಿ–ಆಶ್ರಯಿಸಿ, ಅಪ್ಪತ್ತು–ಆ ಬಂಧವನ್ನು, ವಿಡಾದವರೇ–ಬಿಡಲಾಗ ದವರೇ, ಉತ್ತಾರ್‌ಎನ–ಬಂಧುಗಳು ಎಂದು, ಉಳನ್ರು–(ಅವರ ಹಿಂದೆಯೇ) ತಿರುಗಿ, ಓಡಿ–(ಅವರ ದರ್ಶನವು ಯಾವಾಗ ಸಿಕ್ಕುವುದೆಂದು) ಓಡುತ್ತಿದ್ದವನು, ಇನಿ–ಇನ್ನು ಮೇಲೆ, ನೈಯೇನ್–ನಂಬಿಕೊಳ್ಳುವುದಿಲ್ಲ, ಒಳ್ಳಿಯ–ಸ್ಪಷ್ಟವಾಗಿ ಅರ್ಥಗಳನ್ನು ವಿಶದೀಕರಿಸುತ್ತಿರುವ, ನೂಲ್–ಶಾಸ್ತ್ರಗಳನ್ನು, ಕತ್ತಾರ್–ಕಲಿತು, ಪರವುಮ್– ಸ್ತೋತ್ರಮಾಡುತ್ತಿರುವ, ಇರಾಮಾನುಶನ್–ರಾಮಾನುಜಾಚಾರ್ಯರನ್ನು, ಕರುದುಮ್–ಅನುಸಂಧಾನ ಮಾಡಲು ತವಕಿಸುವ, ಉಳ್ಳಮ್–ಮನಸ್ಸನ್ನು, ಪೆತ್ತಾರ್–ನಿಕ್ಷೇಪವೆಂಬಂತೆ ಲಭಿಸಿದವರು, ಯವರ್–ಯಾರೋ, ಅವರ್–ಅವರೇ,

ಎಮ್ಮೈ–ನಮ್ಮನ್ನು, ನಿನ್ರು–(ನಮ್ಮ ಆತ್ಮವಿರುವವರೆಗೂ) ಒಂದು ರೀತಿಯಲ್ಲಿನ, ಆಳುಮ್–ಪರಿಪಾಲಿಸುವಂತಹ, ಪೆರಿಯವರ್–ಮಹಾತ್ಮರು.

ಇನ್ನುಮೇಲೆ ಸಾಮಾನ್ಯವಾದ ಬದ್ಧಸಂಸಾರಿಗಳನ್ನು ಆಪ್ತೇಷ್ಟ ಬಂಧುಗಳೆಂದು ತಿಳಿದು ಅವರನ್ನು ಆಶ್ರಯಿಸುವ ಶ್ರಮವನ್ನು ಹೊಂದುವುದಿಲ್ಲ. ಶಾಸ್ತ್ರಕೋವಿದರೂ, ತತ್ವ ಹಿತ ಪುರುಷಾರ್ಥಗಳನ್ನು ಅರಿತ ಮಹಾತ್ಮರೂ ಸ್ತೋತ್ರ ಮಾಡುತ್ತಿರುವ ರಾಮಾನುಜಾಚಾರ್ಯರನ್ನು ಧ್ಯಾನಿಸುವ ಮನಸ್ಸನ್ನು ನಿಕ್ಷೇಪವಾಗಿ ಹೊಂದಿ ಇರುವವರು ಎಂತಹವರಾದರೂ, ಅವರೇ ನನ್ನನ್ನು ಎತ್ತಿ ಉದ್ಧರಿಸಲು ಶಕ್ತರು.

**ಪೆರಿಯವರ್ ಪೇಶಿಲುಮ್ ಪೇದೈಯರ್ ಪೇಶಿಲುಮ್,**
**ತನ್ ತುಣಂಗ**
**ಟ್ಕುರಿಯ ಶೊಲ್ಲೆನ್ರು ಮುಡೈಯವನೆನ್ರೆನ್ರು,**
**ಉಣರ್ವಿಲ್ ಮಿಕ್ಕೋರ್**
**ತೆರಿಯುಮ್ ವಣ್ ಕೀರ್ತಿಯಿರಾಮಾನುಶನ್**
**ಮರೈತೇರ್ನ್ದುಲಗಿಲ್**
**ಪುರಿಯುಮನ್ ಜ್ಞಾನಮ್, ಪೊರುನ್ದಾದಾವರೈ**
**ಪೊರುಮ್ ಕಲಿಯೇ.** 87

ಪೆರಿಯವರ್–ಅರಿತ ಮಹಾತ್ಮರು, ಪೇಶಿಲುಮ್–ಮಾತನಾಡಿದರೂ, ಪೇದೈಯರ್–ಜ್ಞಾನವಿಲ್ಲದವರು, ಪೇಶಿಲುಮ್–ಮಾತನಾಡಿದರೂ, ತನ್–ತಮ್ಮ, ಕಣಂಗಳುಕ್ಕು–ಸುಗುಣಗಳಿಗೆ, ಉರಿಯ–ಸರಿಯಾದ, ಶೊಲ್–ಶಬ್ದಗಳನ್ನು, ಎನ್ರುಮ್–ಯಾವಾಗಲೂ, ಉಡೈಯವನ್–ಹೊಂದಿದವರು, ಎನ್ರೆನ್ರು–ಎಂದು ಹೇಳಿ, ಉಣರ್ವಿಲ್ ಮಿಕ್ಕೋರ್–ಹೆಚ್ಚಿನ ಜ್ಞಾನವಂತರಾದವರು, ತೆರಿಯುಮ್–ಚೆನ್ನಾಗಿ ಅರಿತು ಅನುಸಂಧಾನ ಮಾಡುವ, ವಣ್‌ಕೀರ್ತಿ–ದಿವ್ಯ ಕೀರ್ತಿಯುಳ್ಳವರು, ಇರಾಮಾನುಶನ್–ರಾಮಾನುಜರು, ಮರೈ–ವೇದಗಳನ್ನು, ತೇರ್ನ್ದು–ಪರಾಮರ್ಶಿಸಿ, ಉಲಗಿಲ್–ಲೋಕದಲ್ಲಿ, ಪುರಿಯುಮ್–(ವ್ಯಾಖ್ಯಾನಗಳನ್ನು ರಚಿಸುವ ಮೂಲಕ) ಉಪಕಾರ ಮಾಡಿದ, ನಲ್–ಉನ್ನತವಾದ, ಜ್ಞಾನಮ್–ಜ್ಞಾನದಿಂದ, ಪೊರುನ್ದಾವರೈ–ಆಶ್ರಯಿಸಿದವರನ್ನು, ಕಲಿ–ಕಲಿದೋಷವು, ಪೊರುಮ್–ಬಾಧಿಸುವುದು.

ಅಧಿಕವಾದ ಜ್ಞಾನಶಕ್ತಿಯುಳ್ಳವರನ್ನೂ, ಸಾಮಾನ್ಯರನ್ನೂ, ಅವರವರ ಜ್ಞಾನ ಶಕ್ತಿಗಳಿಗೆ ತಕ್ಕಂತೆ ಮಾತುಗಳಲ್ಲಿಯೇ ಸ್ತೋತ್ರ ಮಾಡಲು, ಹೊಂದಿಕೊಳ್ಳುವಂತಹ ಸ್ವರೂಪ ರೂಪಗುಣ ವಿಗ್ರಹ ವಿಭೂತರೂ ಆಗಿರುವ ಜ್ಞಾನಾಧಿಕರು

ಹೊಗಳುತ್ತಿರುವ ಯಶಸ್ಸನ್ನು ಹೊಂದಿರುವ, ರಾಮಾನುಜರಿಂದ ಕರುಣಿಸಲ್ಪಟ್ಟ ವಿಲಕ್ಷಣ ಜ್ಞಾನವನ್ನು ಪಡೆದುಕೊಳ್ಳದೆ ಇರುವವರನ್ನು, ಕಲಿದೋಷವು ಆಕ್ರಮಿಸಿ ಜ್ಞಾನಶೂನ್ಯರನ್ನಾಗಿಸುವುದು ಮಾತ್ರವಲ್ಲದೆ, ಆ ಮಹನೀಯರ ಜ್ಞಾನೋಪದೇಶ ವನ್ನು ಪಡೆದುಕೊಂಡ ನನ್ನನ್ನು ಬಾಧಿಸಲಾರದು.

**ಕಲಿಮಿಕ್ಕ ಶೆನ್ನೆರ್ಕಳನಿಕ್ಕುರೈಯಲ್, ಕಲೈಪ್ಪೆರುಮಾನ್**
**ಒಲಿಮಿಕ್ಕಪಾಡಲ್ಯೆಯುಂಡುತನ್ನುಳ್ಳಂದಡಿತ್ತು, ಅದನಾಲ್**
**ವಲಿಮಿಕ್ಕಶೀಯಮಿರಾಮಾನುಶನ್ ಮರೈವಾದಿಯರಾಮ್**
**ಪುಲಿಮಿಕ್ಕದೆನ್ರು, ಇಪ್ಪುವನತ್ತಿಲ್ ವನ್ದಮೈ**
**ಪೋತ್ತುವನೇ. 88**

ಮಿಕ್ಕ–ಅತಿಶಯವಾದ, ಕಲಿ–ಶಬ್ದದಿಂದ ಕೂಡಿದ, ಶೆನ್ನೆಲ್–ಕೆಂಪುಧಾನ್ಯ ಗಳನ್ನು ಉಳ್ಳ, ಕಳನಿ–ಹೊಲಗಳನ್ನುಳ್ಳ, ಕುರೈಯಲ್–ತಿರುಕ್ಕುರೈಯಲೂರಿಗೆ ನಿರ್ವಾಹಕರಾಗಿ, ಕಲೈ–ಶಾಸ್ತ್ರಗಳನ್ನು ಪ್ರಬಂಧರೂಪವಾಗಿ ಮಾಡಿ ಹಾಡಿದ, ಪೆರುಮಾನ್–ಮಹಾಮಹಿಮರಾದ ತಿರುಮಂಗೈ ಆಳ್ವಾರರ, ಮಿಕ್ಕ–ಅಧಿಕವಾದ, ಒಲಿ–ಧ್ವನಿಯುಳ್ಳ, ಪಾಡಲ್ಯೆ–ಪೆರಿಯ ತಿರುಮೊಳಿ ಪ್ರಬಂಧವನ್ನು, ಉಂಡು–ಅನುಭವಿಸಿ, ತನ್–ತನ್ನ, ಉಳ್ಳಮ್–ಹೃದಯವು, ತಡಿತ್ತು–ಪುಷ್ಟಿಹೊಂದಿ, ಅದನಾಲ್–ಅದರಿಂದ (ಪ್ರತಿಪಕ್ಷದವರ ಮತವನ್ನು ಸಹಿಸದೆ), ಮಿಕ್ಕ–ಅತಿಶಯವಾದ, ವಲಿ–ಶಕ್ತಿಯಿಂದ, ಶೀಯಮ್–ಸಿಂಹದ ರೀತಿಯಲ್ಲಿರುವ, ಇರಾಮಾನುಶನ್–ರಾಮಾನುಜರಿಗೆ, ಮರೈ–ವೇದಗಳನ್ನು ಒಪ್ಪಿಕೊಳ್ಳುವಂತೆ, ವಾದಿಯರಾಮ್–ವಾದಮಾಡಿ ಲೋಕವನ್ನೇ ನಾಶಮಾಡಲಿದ್ದ, ಪುಲಿ–ಕುದೃಷ್ಟಿಯುಳ್ಳ ಹುಲಿಗಳಂತಿದ್ದ, ಮಿಕ್ಕದ್ದು–ಅಧಿಕವಾದ್ದು, ಎನ್ರು–ಎಂದು, ಇಪ್ಪುವನತ್ತಿಲ್–ಈ ಭೂಮಿಯಲ್ಲಿ, ವನ್ದಮೈ–(ಕುದೃಷ್ಟಿ ಪ್ರತಿವಾದಿಗಳನ್ನು ಜಯಿಸಿ ವೇದಪ್ರತಿಷ್ಠಾಪನಾಚಾರ್ಯರಾಗಲು) ಅವತರಿಸಿ ಬಂದ ರೀತಿಯನ್ನು, ಪೋತ್ತುವನ್–ಸ್ತೋತ್ರ ಮಾಡುತ್ತೇನೆ.

ಕೆಂಪು ಧಾನ್ಯಗಳು ವಿಪುಲವಾಗಿ ಬೆಳೆಯತಕ್ಕ ಜಮೀನುಗಳಿಂದ ಕೂಡಿದ ತಿರುಕ್ಕುರೈಯಲೂರ್‌ನಲ್ಲಿ ಅವತರಿಸಿದ ತಿರುಮಂಗೈ ಆಳ್ವಾರರು ಕರುಣಿಸಿರುವ ದಿವ್ಯ ಪ್ರಬಂಧ ಪೆರಿಯ ತಿರುಮೊಳಿಯ ಶಬ್ದಾರ್ಥಾದಿಗಳನ್ನು, ಅನುಸಂಧಾನ ಮಾಡಿ, ಆನಂದಿಸುವ, ದುರ್ಮತಸ್ಥರಾದ ಪ್ರತಿವಾದಿಗಳ ಹೇಯ ಗ್ರಂಥಗಳನ್ನು ಸಹಿಸದವ ರಾದ, ಪ್ರಬಲಸಿಂಹದಂತಿರುವ ಶ್ರೀಮದ್ರಾಮಾನುಜಾಚಾರ್ಯರು, ವೇದಗಳನ್ನು ಸಮ್ಮತಿಸಿದವರನ್ನು ಹಾಗೇ ವೇದವನ್ನು ಒಪ್ಪಿದರೂ ವಿಪರೀತ ಅರ್ಥಗಳನ್ನು ಹೇಳಿ ಲೌಕಿಕರನ್ನು ಅಡ್ಡದಾರಿಗೆ ಎಳೆಯುತ್ತಿದ್ದ ಕುದೃಷ್ಟಿ ಮತಸ್ಥರಾದ ಹುಲಿಗಳನ್ನು

ಸಾರಾಸಗಟು ನಾಶಮಾಡಲು ಎಂದೇ ಈ ಭೂಮಿಯಲ್ಲಿ ಅವತರಿಸಿರುವ ಪ್ರಕಾರವನ್ನು ಸ್ತೋತ್ರವನ್ನು ಮಾಡುವವನಾಗಿದ್ದೇನೆ.

**ಪೋತ್ತರುವರ್ ಶೀಲತ್ತಿರಾಮಾನುಶ , ನಿನ್ ಪುಗೆಳ್ ತೆರಿನ್ದು**

**ಶಾತ್ತುವನೇಲದುತಾಳ್ವದುತೀರಿಲ್ , ಉನ್ ಶೀರ್ ದನಕ್ಕೋರ್**

**ಏತ್ತಮೇನ್ರೇ ಕೊಂಡಿರುಕ್ಕಿಲುಮೆನ್ ಮನಮೇತ್ತಿಯೆನ್ರಿ**

**ಅತ್ತಗಿಲ್ಲಾದು , ಇದರ್ಕೆನ್ನಿನೈವಾಯೆನ್ರಿಟ್ಟಂಗ್ ಜುವನೇ.** 89

ಪೋತ್ತು–ಸ್ತೋತ್ರಮಾಡಿ ಮುಗಿಸಲು , ಅರುಮ್–ಸಾಧ್ಯವಾಗದ , ಶೀಲತ್ತು–ಶೀಲ ಕಲ್ಯಾಣಗುಣಗಳುಳ್ಳ , ಇರಾಮಾನುಶ–ರಾಮಾನುಜಾಚಾರ್ಯರೇ ! , ನಿನ್–ತಮ್ಮ , ಪುಗಳ್–ದಿವ್ಯಗುಣಗಳನ್ನು , ತೆರಿಂದು–ತಿಳಿದುಕೊಂಡು , ಶಾತ್ತುವ ನೇಲ್–(ವಸಿಷ್ಠ ಮಹರ್ಷಿಗಳ ಗುಣಗಳನ್ನು ಚಂಡಾಲನು ಬಣ್ಣಿಸಿದಂತೆ) ವಿಶದೀಕರಿಸಿ ದೇನೋ ? , ಅದು–ಹಾಗೆ ಹೇಳಲು , ತಾಳ್ವು–ಕಡಿಮೆಯಾಗುತ್ತದೆ , ಅದು ತೀರಲ್– ಅಂತಹ ವಿಶದೀಕರಣದಿಂದ ತಪ್ಪಿಸಿಕೊಂಡಿರುವೆನಾದ್ದರಿಂದ , ಉನ್ ಶೀರ್ ದನಕ್ಕು– ತಮ್ಮ ದಿವ್ಯಗುಣಗಳಿಗೆ , ಓರ್ ಏತ್ತಮ್–ಒಳ್ಳೆಯದೇ ಆಯಿತು , ಎನ್ರುಕೊಂಡೆ– ಎಂಬುದಾಗಿ ತಿಳಿದುಕೊಂಡಿದ್ದೇನೆ , ಇರುಕ್ಕಿಲುಮ್–ಅಂತಿದ್ದರೂ , ಎನ್ ಮನಮ್– ನನ್ನ ಹೃದಯವು , ಏತ್ತಿಯನ್ರಿ–ತಮ್ಮನ್ನು ಸ್ತುತಿಸದೆ, ಆತ್ತಗಿಲ್ಲಾದು–ಇರಲಾರದು, ಇದರ್ಕು–ಇದಕ್ಕೆ , ಎನ್ನಿನೈವಾಯ್–ಇದರಲ್ಲಿ ತಮ್ಮ ಅಭಿಪ್ರಾಯವೇನೋ , ಎನ್ರಿಟ್ಟು–ಎಂದು , ಅಂಗ್ ಜುವನ್–ಭಯಪಡುತ್ತೇನೆ.

ಸೌಶೀಲ್ಯಾದಿ ಕಲ್ಯಾಣ ಗುಣಗಳೊಡನೆ ಪ್ರಭಾವಶಾಲಿಗಳಾದ ರಾಮಾನುಜಾ ಚಾರ್ಯರೇ ! ತಮ್ಮ ದಿವ್ಯ ಗುಣಗಳನ್ನು ಸ್ತೋತ್ರಮಾಡುತ್ತಾ ಲೋಕಕ್ಕೆ ಅದನ್ನು ವಿಶದೀಕರಿಸಿ ಪ್ರಚುರ ಪಡಿಸಲು ನನ್ನ ಅಲ್ಪಬುದ್ಧಿಗೆ ತಿಳಿದಂತೆ ಹೇಳಿದಾಗ ತಮ್ಮ ಘನತೆಗೆ ಎಲ್ಲಿ ಕುಂದುಂಟಾಗುವುದೋ ಎಂಬ ಅಂಜಿಕೆಯಿಂದ ಅಂತಹ ಕಾರ್ಯವನ್ನು ಮಾಡದೆ ಇರುವುದೇ ಉತ್ತಮವಾಯಿತೇನೋ ಎಂದರೂ ನನ್ನ ಹೃದಯವು ಮಾತ್ರ ತಮ್ಮ ದಿವ್ಯ ಕಲ್ಯಾಣಗುಣಗಳನ್ನು ಸ್ತೋತ್ರ ಮಾಡದೆ ಇರದು. ಈ ವಿಷಯದಲ್ಲಿ ತಾವು ನನ್ನನ್ನು ಅನ್ಯಥಾ ಭಾವಿಸುವಿರೇನೋ ಎಂದು ಭಯಪಡುತ್ತಿರುವೆನು.

**ನಿನ್ನೈಯಾರ್ ಪಿರವಿಯ್ಯೆನೀಕ್ಕುವರ್ ಪಿರಾನ್ನೈ , ಯಿನ್ನೀಣಿಲತ್ತೇ**

**ಯೆನ್ನೈಯೊಳವಂದ ವಿರಾಮಾನುಶನ್ನೈ , ಯಿರುಂಗ್ಕವಿಗಳ್**

**ಪುನ್ನೈಯಾರ್ ಪುನ್ನೈಯುವ್ ಪೆರಿಯವರ್**

**ತಾಳ್ ಗಳಿಪೂರ್ನನ್ದೋದೀಶ್ಯೈಯಿಲ್**

**ವನ್ನೈಯಾರ್ , ಪಿರಪ್ಪಿಲ್ ವರುನ್ದುವರ್ ಮಾನ್ದರ್**

**ಮರುಳ್ ಶುರನ್ದೇ.** 90

ಪಿರವಿಯೈ–ಸಂಸಾರ ದುಃಖವನ್ನು, ನೀಕ್ಕುಮ್–ನಿವಾರಿಸುವಂತ, ಪಿರಾನೈ–ಉಪಕಾರ ಮಾಡುವ ಯತಿರಾಜರನ್ನು, ನಿನೈಯಾರ್–ಕುರಿತು ಧ್ಯಾನಿಸುವವರು, ನೀಳ್–ವಿಶಾಲವಾದ, ಇನ್ನಿಲತ್ತೇ–ಈ ಭೂಮಿಯಲ್ಲಿರುವಾಗ, ಎನ್ನೈ–ನನ್ನನ್ನು, ಆಳ್–ರಕ್ಷಿಸಲು, ವನ್ದ–(ನಾನಿರುವ ಸ್ಥಳಕ್ಕೇ) ಬಂದ, ಇರಾಮಾನುಶನೈ–ರಾಮಾನುಜರ ವಿಷಯವಾಗಿ, ಇರುಮ್–ಸ್ಪಷ್ಟವಾಗಿ (ಅವರ ಕಲ್ಯಾಣಗುಣಗಳನ್ನು ಪ್ರಕಾಶಪಡಿಸುವಂತಹ), ಕವಿಗಳ್–ಕವನಗಳನ್ನು, ಪುನೈಯಾರ್–ರಚಿಸುವವರು ಇಲ್ಲ, ಪುನೈಯುಮ್–(ಉಡೈಯವರ ವಿಷಯವಾಗಿ ಕವನಗಳನ್ನು) ರಚಿಸುವ, ಪೆರಿಯವರ್–ಮಹಾತ್ಮರುಗಳ, ತಾಳ್‌ಗಳಿಲ್–ಶ್ರೀಪಾದಗಳಲ್ಲಿ, ಪೂಂತೊಡೈಯಿಲ್–ಪುಷ್ಪಮಾಲಿಕೆಯನ್ನು, ನನೈಯಾರ್–ಅಲಂಕಾರ ಮಾಡದೇ ಇರುವ, ಮಾನ್ದರ್–ಮನುಷ್ಯರು, ಮರುಳ್‌ಶುರನ್ದು–ಅಜ್ಞಾನಾತಿಶಯಗಳಿಂದ, ಪಿರಪ್ಪಿಲ್–ಜನ್ಮಾಂತರ ಗಳಲ್ಲಿಯೂ, ವರುನ್ದುವರ್–ಬಾಧೆಪಡುತ್ತಾ ದುಃಖಿಸುವರು.

ಲೋಕದಲ್ಲಿ ಮಾನವರ ದುಃಖಸ್ಥಿತಿಯನ್ನು ನಿವಾರಿಸಲು ಅವತರಿಸಿ ಬಂದ ರಾಮಾನುಜಾಚಾರ್ಯರು, ಪಾತ್ರಾಪಾತ್ರರನ್ನು, ಯೋಗ್ಯಾಯೋಗ್ಯರೆಂಬುದನ್ನು ಗಮನಕ್ಕೆ ತೆಗೆದುಕೊಳ್ಳದೆ ಎಲ್ಲರನ್ನೂ ತಮ್ಮ ಕರುಣಾ ಕಟಾಕ್ಷದಿಂದ ಅನುಗ್ರಹಿಸಿ ದರು ಮತ್ತು ಅವರ ಪಾಪಕರ್ಮಗಳನ್ನು ಸಮೂಲ ತೊಡೆದು ಹಾಕಿದರು. ಇಂತಹ ಮಹಾಮಹಿಮರನ್ನು ಕೊಂಡಾಡುವ ಜನರು ಇರುವಾಗ, ನನ್ನಂತಹ ದುಷ್ಕರ್ಮಿಯು ಇರುವ ಸ್ಥಳವನ್ನು ಹುಡುಕಿಕೊಂಡು ಬಂದು ನನ್ನನ್ನು ಉದ್ಧರಿಸಿರುವರು. ಇವರನ್ನು ಪಾಡಿ ಹೊಗಳಿ ಕವನಗಳನ್ನು ರಚಿಸುವ ಶಕ್ತಿ ನನಗಿಲ್ಲವಾಗಿದೆ. ಶ್ರೀಯುವರನ್ನು ಹೊಗಳಿ ಹಾಡುವ ಮಹಾತ್ಮರ ಪಾದಗಳಲ್ಲಿ ಪುಷ್ಪಮಾಲಿಕೆಗಳನ್ನು ಅಲಂಕರಿಸದೆ ಇರುವ ಮಾನವರು, ಅಜ್ಞಾನದಿಂದಲೂ ದುಃಖದಿಂದಲೂ ಜನ್ಮಾಂತರಗಳಲ್ಲಿಯೂ ಬಾಧೆಪಡುವರಲ್ಲಾ!

**ಮರುಳ್‌ಶುರನ್ದಾಗಮ ವಾದಿಯರ್‌ಕೂರುಮ್,**
**ಅವಪ್ಪೊರುಳಾಮ್**
**ಇರುಳ್‌ಶುರನ್ದೆಯ್‌ತ್ತವುಲಗಿರುಳ್ ನೀಂಗ,**
**ತನ್ನಿಂಡಿಯಶೀರ್**
**ಅರುಳ್‌ಶುರನ್ದೆಲ್ಲಾವುಯಿರ್‌ಗಟ್ಕುನಾದನರಂಗನೆನ್ನುಮ್**
**ಪೊರುಳ್‌ಶುರನ್ದಾನ್, ಎಮ್ಮಿರಾಮಾನುಶನ್‌ಮಿಕ್ಕ**
**ಪುಣ್ಣಿಯನೇ** 91

ಮರುಳ್–ಅಜ್ಞಾನವೆಲ್ಲವನ್ನೂ, ಶುರನ್ದು–ಒಟ್ಟಿಗೆ ಸೇರಿ, ಆಗಮ ವಾದಿಯರ್–ಶಿವನು ಹೇಳಿದ ಶೈವಾಗಮವನ್ನು ಪ್ರಮಾಣವಾಗಿರಿಸಿಕೊಂಡು

ವಾದಿಸುವ ಪಾಶುಪತಾದಿ ಮತಸ್ಥರು, ಕೂರುಮ್–ಹೇಳುತ್ತಿರುವ, ಅವಮ್–ಮತ್ತೂ ಹೀನವಾದ, ಪೊರುಳಾಮ್–ಅರ್ಥಗಳನ್ನು ಕಲ್ಪಿಸಿದಾಗ, ಇರುಳ್–ಅಂಧಕಾರವು, ಶುರನ್ದು–ಅತಿಶಯವಾಗಿ, ಏಯ್ತ್ತ–ಅದರಿಂದ ಹಾಳಾದ, ಉಲಗು–ಲೋಕದಲ್ಲಿ, ಇರುಳ್–ಕತ್ತಲೆಯು, ನೀಂಗಿ–ತೊಲಗಿಹೋಗುವಂತೆ, ತನ್–ತಮ್ಮನ್ನು, ಈಂಡಿಯ–ಕೂಡಿದ (ಆಶ್ರಯಿಸಿದ), ಶೀರ್–ಆಶ್ರಿತ ರಕ್ಷಣವಾದ ವೈಲಕ್ಷಣ ಗುಣವುಳ್ಳ, ಅರುಳ್–ಕೃಪೆಯನ್ನು, ಶುರನ್ದು–ವ್ಯಾಪಿಸುವಂತೆ ಮಾಡಿ, ಅರಂಗನ್–ಶ್ರೀರಂಗನಾಥನು, ಎಲ್ಲಾ ಉಯಿರ್ಗಟ್ಕು–ಸಕಲಾತ್ಮರಿಗೂ, ನಾದನ್–ಸ್ವಾಮಿಯು, ಎನ್ನುಮ್–ಎಂಬ ಸತ್ಯವನ್ನು, ಪೊರುಳ್–ಅರ್ಥವಿಶೇಷವನ್ನೂ, ಮಿಕ್ಕಪುಣಿಯನ್–ಪರಮ ಧಾರ್ಮಿಕ ಪುಣ್ಯವಂತರಾದ, ಎನ್ ಇರಾಮಾನುಶನ್–ನಮ್ಮ ರಾಮಾನುಜಾಚಾರ್ಯರು, ಶುರನ್ದಾನ್–ಪ್ರತಿಪಾದಿಸಿ ಉಪಕಾರ ಮಾಡಿದ್ದಾರೆ.

ಶೈವಾಗಮವನ್ನು ಆಧಾರವಾಗಿರಿಸಿಕೊಂಡು ರುದ್ರ ಪಕ್ಷಪಾತಿಗಳಾದ ಪಾಶುಪತಾದಿಗಳು ವಾದಿಸುತ್ತಿದ್ದ ದುಸ್ತರವಾದ ಅಂಧಕಾರವನ್ನು ಭೂಮಿಯಿಂದ ತೊಲಗಿ ಹೋಗುವಂತೆ ಮಾಡಿದ ರಾಮಾನುಜರ ನಿರ್ಹೇತುಕ ಕೃಪೆಯನ್ನು ಲೋಕದಲ್ಲೆಲ್ಲಾ ಪ್ರವಹಿಸುವಂತೆ ಮಾಡಿ, ಸಕಲಾತ್ಮರಿಗೆ ಸೇವೆ ನೀಡುತ್ತಿರುವ ಶ್ರೀರಂಗನಾಥನೇ ಸರ್ವ ಸ್ವಾಮಿ, ಪರಾತ್ಪರನೆಂಬ ಸತ್ಯವನ್ನು ನಮಗೆಲ್ಲಾ ತಿಳಿಯುವಂತೆ ಹೇಳಿದ ಯತಿರಾಜರ ಯಾವ ಮಹೋಪಕಾರವನ್ನು ಸ್ತುತಿಸಲು ನಾನು ಅಶಕ್ತನಾಗಿದ್ದೇನೆ.

**ಪುಣ್ಣಿಯನೋನ್ಬು ಪುರಿನ್ದುಮಿಲೇನ್, ಅಡಿಪೋತ್ತಿಶೆಯ್ಯುಮ್**
**ನುಣ್ಣರುಮ್ ಕೇಳ್ವಿನುಮನ್ರುಮಿಲೇನ್, ಶೆಮ್ಮೈ ನೂಪ್ಪುಲವರ್ಕು**
**ಎಣ್ಣರುಮ್ ಕೀರ್ತಿಯಿರಾಮಾನುಶಮಿನ್ರು ನೀಪುಗುನ್ದುಎನ್**
**ಕಣ್ಣುಳ್ಳುಮ್ ನೆಂಗುಳ್ಳುಮ್,**
**ನಿನ್ರುಮಿಕ್ಕಾರಣಮ್ ಕಟ್ಟುರೈಯೇ** 92

ಪುಣ್ಣಿಯನೊನ್ಬು–(ಪುರುಷಾರ್ಥ ಸಾಧನೆಗೆ) ಒಂದು ಪುಣ್ಯವ್ರತವನ್ನು, ಪುರಿನ್ದು–ಆಚರಿಸುವ, ಇಲೇನ್–ಇಲ್ಲದವನಾದೆನು, ಅಡಿ–ಶ್ರೀಪಾದಗಳನ್ನು, ಪೋತ್ತಿಶೆಯುಮ್–ಆಶ್ರಯಿಸುವುದಕ್ಕೆ ಸಾರ್ಥಕವಾದ, ನುಣ್–ಸೂಕ್ಷ್ಮವಾದ, ಅರುಮ್–ದುರ್ಲಭವಾದ, ಕೇಳ್ವಿ–ಪ್ರವಚನಗಳನ್ನು ಕೇಳಲು, ನುಮನ್ರುಮಿಲೇನ್–ಯೋಚಿಸಿದವನೂ ಅಲ್ಲ, ಶೆಮ್ಮೈ–ಅನನ್ಯ ಪ್ರಯೋಜನರಾಗಿ, ನೂಲ್–ಶಾಸ್ತ್ರರೂಪವಾದ ಕವನಗಳನ್ನು, ಪುಲವರ್ಕು–ಹೇಳುವ ಸಾಮರ್ಥ್ಯವುಳ್ಳವರಲ್ಲಿ, ಎಣ್ಣರುಮ್–ಪ್ರಸ್ತಾಪಿಸಿದವನೂ ಅಲ್ಲ, ಕೀರ್ತಿ–ಯಶೋವಂತರಾದ, ಇರಾಮಾನುಶಾ–ರಾಮಾನುಜಾಚಾರ್ಯರೇ !, ನೀ–ನೀವು, ಇನ್ರು–(ಎಂದೂ ಇಲ್ಲದೆ ಇದ್ದು) ಈಗ,

ಉಗನ್ದು–ಸಂತೋಷಪಟ್ಟು, ಎನ್–ನನ್ನ, ಕಣ್ಣುಳ್ಳವ್–ಕಣ್ಣುಗಳಲ್ಲಿಯೂ, ನೆಂಗುಳ್ಳುಮ್–ಹೃದಯದಲ್ಲಿಯೂ, ನಿನ್ರ–ತುಂಬಿಕೊಂಡಿರುವುದು, ಇಕ್ಕಾರಣಮ್–ಯಾವ ಕಾರಣದಿಂದ ಎಂಬುದನ್ನು, ಕಟ್ಟುರೈ–ತಾವೇ ತಿಳಿಸಬೇಕು.

ಓ ರಾಮಾನುಜಾಚಾರ್ಯರೇ! ಯಾವ ಒಂದು ಪುಣ್ಯವ್ರತವನ್ನಾಚರಿಸಿದವನಲ್ಲ, ತಮ್ಮ ದುರ್ಲಭವಾದ ಶ್ರೀಪಾದಗಳನ್ನು ಆಶ್ರಯಿಸುವುದಕ್ಕೆ ಸಾಧಕವಾದ, ಶಾಸ್ತ್ರ ಪ್ರವಚನಗಳನ್ನು ಕೇಳಲು ಯೋಚಿಸಿದವನೂ ಅಲ್ಲ, ಅನನ್ಯ ಪ್ರಯೋಜನ ರಾಗಿ, ಶಾಸ್ತ್ರರೂಪಕವಾದ ಕವನಗಳನ್ನು ರಚಿಸಿ ಹೇಳುವ ಸಾಮರ್ಥ್ಯವುಳ್ಳ ಮಹಾತ್ಮರ ಸಂಸರ್ಗವನ್ನೂ ಪಡೆದವನಲ್ಲ, ಯಶೋವಂತರಾದ ತಾವು ಈಗ ನನ್ನ ಕಣ್ಣಲ್ಲಿ, ಮನದಲ್ಲಿ ತುಂಬಿಕೊಂಡಿರುವ ಕಾರಣವನ್ನು ತಾವೇ ಅನುಗ್ರಹಿಸಬೇಕು.

**ಕಟ್ಟೈಪ್ಪೊರುಳೈಮರೈಪ್ಪೊರುಳೆನ್ರು, ಕಯುವರ್ ಶೊಲ್ಲುಮ್**
**ಪೆಟ್ಟೈಕ್ಕೆಡುಕ್ಕುಮ್ ಪಿರಾನಲ್ಲನೇ, ಎನ್ ಪೆರುವಿನೈಯೈ**
**ಕಿಟ್ಟಿಕ್ಕಿಳಂಗೊಡು ತನ್ನರುಳೆನ್ನುಮೊಳ್ವಾಳುರುವಿ**
**ವೆಟ್ಟಿಕ್ಕಳೈನ್ದ, ಇರಾಮಾನುಶನೆನ್ನುಮ್ ಮೆಯ್ ತ್ತವನೇ.** 93

ಎನ್–ನನ್ನ, ಪೆರುವಿನೈಯೈ–ಮಹಾಪಾಪಗಳನ್ನು, ಕಿಟ್ಟಿ–ಸಮೀಪಿಸಿ, ಕಿಳಂಗೊಡು–(ಪುನರಾವರ್ತನೆಗೆ ಕಾರಣವಾದ) ಸಮೂಲವಾಗಿ, ತನ್–ತಮ್ಮ, ಅರುಳೆನ್ನುಮ್–ಕೃಪೆಯೆಂಬ, ಒಳ್–(ಹರಿತವಾಗಿ ಹದಗೈದಿದ್ದ) ಪ್ರಕಾಶಿಸುವ, ವಾಳ್–ಕತ್ತಿಯನ್ನು, ಉರುವಿ–ಒರೆಯಿಂದ ಹೊರಗೆಳೆದು, ವೆಟ್ಟಿಕ್ಕಳೈಂದ–ಕತ್ತರಿಸಿ ಹಾಕಿದ, ಮೆಯ್ ತ್ತವನ್ ಎನ್ನುಮ್–ವಾಸ್ತವವಾದ ತಪಸ್ಸಿದ್ಧಿಯುಳ್ಳವರೆಂದು ಪ್ರಸಿದ್ಧಿ ಪಡೆದಿರುವ, ಇರಾಮಾನುಶನ್–ರಾಮಾನುಜರು, ಕಟ್ಟೈಪ್ಪೊರುಳೈ–ತುಚ್ಛವಾದ ಅರ್ಥಗಳನ್ನು, ಮರೈಪ್ಪೊರುಳೆನ್ರು–ವೇದಗಳು ಸುಳ್ಳೆಂದು ಅರ್ಥಕಲ್ಪಿಸುವ, ಕವಿಯರ್–ದುರ್ಮಾರ್ಗ ಪಂಡಿತರಿಗೆ, ಶೊಲ್ಲುಮ್–ವಾದಿಸಲು, ಪೆಟ್ಟೈ–ಮಾತುಗಳೇ ಇಲ್ಲದಂತೆ ಮಾಡಿ, ಅಡಕ್ಕುಮ್–ನಿರ್ನಾಮ ಮಾಡಿದ, ಪಿರಾನ್ ಅಲ್ಲನೇ–ಉಪಕಾರಿಗಳಲ್ಲವೇ.

ಪ್ರಪನ್ನ ಕುಲಕ್ಕೇ ಮಕುಟಪ್ರಾಯರಾದ ಉಡೈಯವರು ತಮ್ಮ ಸಂಕಲ್ಪವೆಂಬ ಒರೆಯಿಂದ ಕೃಪೆ ಎಂಬ ಕತ್ತಿಯನ್ನು ತೆಗೆದು, ಅದರಿಂದ ನನ್ನ ಪ್ರಬಲವಾದ ಪಾಪಗಳ ರಾಶಿಯನ್ನು ನಿಶ್ಶೇಷವಾಗಿ ತರಿದುಹಾಕಿದರು, ವೇದಗಳಿಗೆ ವಿಪರೀತಾರ್ಥಗಳನ್ನು ಕಲ್ಪಿಸಿ ವಿಪರೀತ ಜ್ಞಾನದಿಂದ ವಿಜೃಂಭಿಸಿಕೊಂಡಿದ್ದ ಕುಮತಸ್ಥರ ವಾದಗಳನ್ನು ಮತ್ತು ಅಪರಾಧಗಳನ್ನು, ತಮ್ಮ ತತ್ತ್ವಪೂರ್ಣವಾದ ವಿಶಿಷ್ಟಾದ್ವೈತ ಜ್ಞಾನದಿಂದ ವಾದಿಸಿ, ಅವರನ್ನು ದಿಕ್ ಮೂಢರನ್ನಾಗಿಸುತ್ತಲೂ ಅವರನ್ನು ಕ್ಷಮಿಸುತ್ತಲೂ

ವಿಜೃಂಭಿಸಿದ, ಪರಮ ಕಾರುಣಿಕರಾದ ರಾಮಾನುಜರ ಉಪಕಾರವು ಎಂತಹುದೆಂದು ಹೇಳಲಾಗುವುದೇ ?

**ತವಮ್ ತರುಮ್ ಶೆಲ್ವಮ್ ತಗವುಮ್ ತರುಮ್, ಶರಿಯಾಪ್ಪಿರವಿ**
**ಪ್ಪವಮ್ ತರುಮ್ ತೀವಿನೈಪಾತ್ತಿತ್ತರುಮ್, ಪರನ್ದಾಮಮೆನ್ನುಮ್**
**ಶಿವಮ್ ತರುಮ್, ತೀದಿಲಿರಾಮಾನುಶನ್ ತನ್ನೈ ಚ್ಚಾರ್ನ್ದವರ್ಗ**
**ಟ್ಕುವನ್ದರುನ್ದೇನ್, ಅವನ್ ಶೀರನ್ರಿಯಾನೊನ್ರು**
**ಮುಳ್ಮಗಿಳ್ನ್ದೇ. 94**

ತೀದು–(ಆಶ್ರಿತರಾದವರು ದುಃಖಪಡುವಂತಹದನ್ನು ನೋಡುವ) ದೋಷವು, ಇಲ್–ಇಲ್ಲದ, ಇರಾಮಾನುಶನ್–ರಾಮಾನುಜಾಚಾರ್ಯರು, ತನ್ನೈ–ತಮ್ಮನ್ನು, ಶಾರ್ನ್ದವರ್ಗಟ್ಕು–ಆಶ್ರಯಿಸಿದವರಿಗೆ, ತವಮ್–ಪ್ರಪತ್ತಿನಿಷ್ಠೆ (ಶರಣಾಗತಿ ರೂಪವಾದ ತಪಸ್ಸನ್ನು), ತರುಮ್–(ಕೃಪೆಯಿಂದ) ಕರುಣಿಸಿದರು, ಶೆಲ್ವಮ್–ಭಕ್ತಿ ಎಂಬ ಸಂಪತ್ತನ್ನು, ತಗವು–(ಫಲಕ್ಕೆ) ತಕ್ಕಂತೆ, ತರುಮ್–ಇತ್ತರು, ಶರಿಯಾ–ಎಂದೂ ನಾಶವಾಗದ, ಪಿರವಿ–ಹುಟ್ಟುಸಾವುಗಳಿಂದ ಕೂಡಿದ, ಪವಮ್–ಸಂಸಾರದಲ್ಲಿ, ತರುಮ್–ಮೇಲಿಂದ ಮೇಲೆ ಮಾಡುತ್ತಲೇ ಇರುವ, ತೀವಿನೈ–ಕ್ರೂರಕರ್ಮಗಳನ್ನು, ಪಾತ್ತಿ–ಧೂಳೀಪಟ, ತರುಮ್–ಮಾಡಿದರು, ಪರನ್ದಾಮಮ್ ಎನ್ನುಮ್–ಪರಮಪದ ಎನ್ನುವ, ಶಿವಮ್–ಶ್ರೀವೈಕುಂಠ ಪ್ರಾಪ್ತಿಯನ್ನು, ತರುಮ್–ಕೊಡಿಸಿದರು (ಅವರು ಹೀಗೆ ಸರ್ವಸ್ವವನ್ನು ಕೊಟ್ಟರೂ), ಯಾನ್–ನಾನು, ಅವನ್–ಆ ರಾಮಾನುಜರ, ಶೀರ್‌ಅನ್ರಿ–ಗುಣಗಳಲ್ಲಿ, ಒನ್ರೈಯುಮ್–ಒಂದನ್ನಾದರೂ, ಉಳ್‌ಮಗಿಳ್ನ್ದು–ಮನಃಪ್ರೀತಿಯಿಂದ, ಉವನ್ದು–ಆಸೆ ಹೊಂದಿದವನಾಗಿ, ಅರುನ್ದೇನ್–ಭಜಿಸುವುದಿಲ್ಲವು.

ತಮ್ಮನ್ನು ಆಶ್ರಯಿಸಿದವರಿಗೆ ಸ್ವಲ್ಪವಾದರೂ ದುಃಖವುಂಟಾಗುವುದನ್ನು ಸಹಿಸದ ರಾಮಾನುಜಾಚಾರ್ಯರು ತಮ್ಮ ಆಶ್ರಿತರಿಗೆ, ಸರ್ವೋತ್ತಾರಕ ಹೇತುವಾದ, ಸ್ವರೂಪಾನುಗುಣವಾದ, ಪ್ರಪತ್ತಿ ಎಂಬ ಉಪಾಯವನ್ನು, ಭಕ್ತಿಯನ್ನೂ ಕೃಪೆ ಮಾಡಿದರು. ಈ ಸಂಸಾರಿ ಚೇತನರಿಗೆ ಸಂಬಂಧಿಸಿದ, ಎಂದೂ ಬಿಡದಿರುವ ಜನನ ಮರಣಾದಿ ದುಃಖವರ್ಧಕವಾದ ದುಷ್ಕರ್ಮಗಳನ್ನು ನಿರ್ಮೂಲಮಾಡಿ, ಪರಮ ಪುರುಷಾರ್ಥ ಲಕ್ಷಣವಾದ ಮೋಕ್ಷವನ್ನು ಕೊಡಿಸಿದರು. ಇಂತಹ ಆ ರಾಮಾನುಜರು ಮಹೋಪಕಾರಿಗಳಾಗಿರುವಾಗ, ನಾನು ಅವರ ಕಲ್ಯಾಣಗುಣಗಳನ್ನಲ್ಲದೆ ಬೇರೊಂದನ್ನು ಆಶ್ರಿಸಿ ಅನುಭವಿಸಲೊಲ್ಲೆ.

**ಉಣ್ಣಿನ್ರುಯಿರ್‌ಗಳುಕ್ಕುತ್ತನವೇಶೆಯ್‌ದು, ಅವರ್ಕ್ಕುಯ್ಯವೇ**
**ಪಣ್ಣುಮ್‌ಪರನುಮ್ ಪರಿವಿಲನಾಂಬಡಿ, ಪಲ್ಲುಯಿರ್ಕ್ಕುಮ್**
**ವಿಣ್ಣಿನ್ ತಲೈನಿನ್ರುವೀಡಳಿಪ್ಪಾನೆಮ್ಮಿರಾಮಾನುಶನ್**
**ಮಣ್ಣಿನ್ ತಲತ್ತುದಿತ್ತು, ಮರೈನಾಲುಮ್ ವಳರ್ತನನೇ.** 95

ಉಳ್–ಒಳಗಡೆಯೇ ಇದ್ದು (ಅಂತರಾತ್ಮನಾಗಿದ್ದು), ಉಯಿರ್‌ಗಳುಕ್ಕು–ಈ ಆತ್ಮರಿಗೆ, ಉತ್ತನನೇ–ಸರಿಯಾದ ಕಾರ್ಯಗಳನ್ನೇ, ಶೆಯ್‌ದು–ಮಾಡಿ, ಅವರ್ಕ್ಕು–ಆ ಆತ್ಮರಿಗೆ, ಉಯ್ಯವೇ–ಉದ್ಧಾರವನ್ನೇ, ಪಣ್ಣುಮ್–ಮಾಡುತ್ತಿರುವ, ಪರನುಮ್–ಸರ್ವಸ್ವಾತ್ಮಕನಾದ ಶ್ರಿಯಃಪತಿಯು, ಪರಿವಿಲನಾಂಬಡಿ–(ಆತ್ಮನ ವಿಷಯವಾಗಿ ಇವರೊಡನೆ) ಸ್ನೇಹವಿಲ್ಲದವನು ಎಂಬಂತೆ, ಪಲ್ಲುಯಿರ್ಕ್ಕುಮ್–ಸಕಲಾತ್ಮರಿಗೂ, ವೀಡು (ಪರಮ ಪುರುಷಾರ್ಥ ಲಕ್ಷಣ) ಮೋಕ್ಷವನ್ನು, ಅಳಿಪ್ಪಾನ್–ಕೊಡಿಸುವುದಕ್ಕಾಗಿ, ಎಮ್–ನಮ್ಮ ನಾಥರಾದ, ಇರಾಮಾನುಶನ್–ರಾಮಾನುಜಾಚಾರ್ಯರು, ವಿಣ್ಣಿನ್ ತಲೈನಿನ್ರುಮ್–ಆಕಾಶದಲ್ಲಿ ಶಿರಸ್ಥಾನವನ್ನು ಪಡೆದಿರುವ ಶ್ರೀವೈಕುಂಠದಿಂದ, ಮಣ್ಣಿನ್ ತಲತ್ತು–ಈ ಭೂಲೋಕದಲ್ಲಿ, ಅಉದಿತ್ತು–ಅವತರಿಸಿ, ಮರೈನಾಲುಮ್–ಚತುರ್ವೇದಗಳನ್ನೂ, ವಳರ್ತನನ್–ವಿಶೇಷವಾಗಿ ವೃದ್ಧಿ ಹೊಂದುವಂತೆ ಮಾಡಿದರು.

ಸಕಲಾತ್ಮರಿಗೂ ಅಂತರ್ಯಾಮಿಯಾಗಿದ್ದು, ಅವರ ಪ್ರವೃತ್ತಿ ನಿವೃತ್ತಿಗಳೆಲ್ಲಕ್ಕೂ ಕಾರಣಭೂತನಾದ ಸರ್ವೇಶ್ವರನು ಕೂಡ, ರಾಮಾನುಜರಂತೆಯೇ ಆಶ್ರಿತರ ವಿಷಯವಾಗಿ ವ್ಯಾಮೋಹವನ್ನು ಹೊಂದಿದವನಾಗುವುದಿಲ್ಲವೆಂದು, ಇವರು ಜ್ಞಾನ, ಭಕ್ತಿ, ವೈರಾಗ್ಯಾದಿ ದಿವ್ಯಗುಣಗಳಿಂದ, ಸಂಸಾರಿಗಳ ಕರ್ಮಬಂಧವನ್ನು ಬಿಡಿಸಲೋಸುಗ ಪರಮಪದದಿಂದ ಬಂದು ಭೂತಲದಲ್ಲಿ ಅವತರಿಸಿ, ವೇದಗಳನ್ನು ಕುತ್ಸಿತವಾದಿಗಳಿಂದ ರಕ್ಷಿಸಿ, ವೇದಮಾರ್ಗ ಪ್ರತಿಷ್ಠಾಪನಾಚಾರ್ಯರಾದರು.

**ವಳರುಮ್ ಪಿಣಿಗೊಂಡವಲ್ವಿನೈಯಾಲ್,**
**ಮಿಕ್ಕನಲ್‌ವಿನೈಯಿಲ್**
**ಕಿಳರುಮ್ ತುಣಿವುಕಿಡೈತ್ತರಿಯಾದು,**
**ಮುಡೈತ್ತಲೈಯೂನ್**
**ತಳರುಮಳವುಮ್ ತರಿತ್ತುಮ್ ವಿಳುನ್ದುಮ್**
**ತನಿದಿರಿವೇರ್ಕ್ಕು**
**ಉಳರ್ ಎಮ್ಮಿರ್ಕ್ಕೈವನ್, ಇರಾಮಾನುಶನ್ರುನ್ನೈಯುತ್ತವರೇ.** 96

ವಳರುಮ್–ವೃದ್ಧಿಯಾಗುತ್ತಿದ್ದ, ಪಿಣಿ–ದುಃಖವನ್ನು, ಕೊಂಡ–ಅಂಟಿಕೊಳ್ಳದಂತೆ, ವಲ್–(ಅನುಭವ ಪ್ರಾಯಶ್ಚಿತ್ತಾದಿಗಳಿಂದ ನಶಿಸದಿರುವಂತೆ) ಪ್ರಬಲವಾದ, ವಿನ್ನೈಯಾಲ್–ಪಾಪಕರ್ಮಗಳಿಂದ, ಮಿಕ್ಕ–ಅತಿಶಯವಾದ, ನಲ್‌ವಿನ್ನೈಯಿಲ್–ಪರಮಧರ್ಮವಾದ ಶರಣಾಗತಿಯಿಂದ, ಕಿಳರುಮ್–ಅತಿಶಯವಾಗುತ್ತಿದ್ದ, ತುಣಿವು–ವಿಶ್ವಾಸವು, ಕಿಡೈತ್ತರಿಯಾದು–ನೇರವಾಗಿ ಸಿಗದೆ, ಮುಡೈತ್ತಲೈ–ಸ್ವಭಾವ ದುರ್ಗಂಧ ಸ್ಥಾನವಾದ, ಊನ್–ಶರೀರವು, ತಳರುಮಳವುಮ್–ಬಲಹೀನವಾಗುವವರೆಗೂ, ತರಿತ್ತುಮ್–ಧರಿಸಿದ್ದು, ವಿಳುನ್ದುಮ್–(ಕ್ರೂರವಾದ ಶಬ್ದಾದಿ ವಿಷಯಗಳಲ್ಲಿ) ಬಿದ್ದು, ತನಿ–(ಸಹಾಯವಿಲ್ಲದೆ) ಏಕಾಕಿಯಾಗಿ, ತಿರುವೇರ್ಕು–ಸಂಚರಿಸುತ್ತಿದ್ದ ನನಗೆ, ಎಮ್ ಇರೈವನ್–ನಮಗೆ ನಾಥರಾದ, ಇರಾಮಾನುಶನ್ ತನ್ನೈ–ರಾಮಾನುಜರು ತಮ್ಮನ್ನು, ಉತ್ತವರ್–ಆಶ್ರಯವನ್ನಾಗಿ ಪಡೆದವರು, ಉಳರ್–ಸಹಾಯಕರಾಗಿದ್ದಾರೆ. ಇಲ್ಲಿ "ಎಮ್ಮಿರೈವರ್" ಎಂಬಂತೆ ತಿಳಿದರೆ ಉಡೈಯವರ ಭಕ್ತರು ನಮಗೆ ಸ್ವಾಮಿಗಳು ಎಂಬುದು ಅರ್ಥ.

ಶರಣಾಗತಿಯು (ಪ್ರಪತ್ತಿಯು) ಲಭಿಸಬೇಕಾದರೆ, ಪ್ರಬಲ ಕರ್ಮಗಳು ಪ್ರತಿಬಂಧಕಗಳಾಗಿರುವುವು. ಪ್ರಪತ್ತಿ ಮಾಡಲು ಮಹಾವಿಶ್ವಾಸವು ಮುಖ್ಯವೆಂಬುದನ್ನರಿಯದೆ ದುರ್ಗಂಧ ಪ್ರಸಾರಕವಾದ ರಕ್ತಮಾಂಸಮಯವಾದ ಮಾನವ ದೇಹವು ದುರ್ಬಲವಾಗುವವರೆಗೂ, ಸುಖದುಃಖಾದಿಗಳನ್ನು ಅನುಭವಿಸುತ್ತಾ ಏಕಾಕಿಯಾಗಿ ಅಲೆದ ನನಗೆ, ಚರಮೋಪಾಯವೆಂಬ ಉಡೈಯವರಿಗಿಂತಲೂ, ಅವರ ಭಕ್ತರಾದ ಸುಲಭಸಾಧ್ಯರಾದ ಪ್ರಸನ್ನರಾದ ಸ್ವಾಮಿಗಳು, ನಮಗೆ ಸಕಲವಿಧ ಬಂಧುಗಳು ಎಂಬರಿತು, ಇತರ ದೈವವಾವುದನ್ನೂ ಗುರುತಿಸದೇ ಇರುವ ಮಹಾತ್ಮರೇ ನಮಗೆ ಮಾರ್ಗದರ್ಶಕರಾಗಿಯೂ ರಕ್ಷಕರಾಗಿಯೂ ಇರುವರೆಂಬ ವಿಶ್ವಾಸದಿಂದಿರುವೆನು.

ತನ್ನೈಯುತ್ತಾಟ್ಚೆಯ್ಯುಮ್ ತನ್ನೈಯಿನೋರ್,
ಮನ್ನುತಾಮರೈತ್ತಾಳ್
ತನ್ನೈಯುತ್ತಾಟ್ಚೆಯ್ಯವೆನ್ನೈಯುತ್ತಾನಿನ್ರು,
ತನ್‌ತಗವಾಲ್
ತನ್ನೈಯುತ್ತಾರನ್ರಿತ್ತನ್ನೈಯುತ್ತಾರಿಲ್ಲೈಯೆನ್ರರಿನ್ದು
ತನ್ನೈಯುತ್ತಾರೈ, ಯಿರಾಮಾನುಶನ್
ಗುಣಮ್ ಶಾತ್ತಿಡುಮೇ. 97

ತನ್ನೈ–ತಮ್ಮನ್ನು, ಉತ್ತಾರ್‌ಅನ್ರಿ–ಆಶ್ರಯಿಸುವವರಿರುವರು ಅಷ್ಟೇ ಅಲ್ಲದೆ, ತನ್ನೈ–ತಮ್ಮನ್ನು, ಉತ್ತಾರೈ–ಆಶ್ರಯಿಸಿದವರ, ಕುಣಮ್–ಸದ್ಗುಣಗಳನ್ನು,

ತ್ತಿಡುಮ್–ಸಂಕೀರ್ತನೆ ಮಾಡೋಣವೆಂಬ, ತನ್ನೈ–ಸ್ವಭಾವದಿಂದ, ಉತ್ತಾರ್–ಕೂಡಿರುವವರು, ಇಲ್ಲೈಎನ್ರು–ಇಲ್ಲವೆಂದು, ಅರಿಂದು–ಗ್ರಹಿಸಿ, ತನ್ನೈ–ತಮ್ಮನ್ನು, ಉತ್ತು–ಆಶ್ರಯಿಸಿ, ಆಳ್‌ಶೆಯ್ಯ್ಯಮ್–ತಮಗೆ ಸೇವೆ ಮಾಡುವುದಲ್ಲೇ, ತನ್ನೈಯಿನೋರ್–ತಲ್ಲೀನರಾಗಿರುವ, ಮನ್ನು–ಒಂದಕ್ಕೊಂದು ಸೇರಿದ, ತಾಮರೈ–ತಾವರೆ ಹೂವಿನಂತೆ, ಪರಮ ಭೋಗ್ಯವಾಗಿರುವ, ತಾಳ್‌ತನ್ನೈ–ಅವರ ಶ್ರೀಪಾದಗಳನ್ನು, ಉತ್ತು–ಆಶ್ರಯಿಸಿ, ಆಳ್‌ಶೆಯ್ಯ–ಅವರಿಗೆ ದಾಸನಾಗಿ ಸೇವೆ ಮಾಡುವಂತೆ (ಅನುಗ್ರಹ ಮಾಡಿದ), ಇರಾಮಾನುಶನ್–ರಾಮಾನುಜಾಚಾರ್ಯರು, ಶನ್–ತಮ್ಮ, ತಗವಾಲ್–ಕೃಪೆಯಿಂದ, ಇನ್ರು–ಈ ಸಮಯದಲ್ಲಿ, ಎನ್ನೈ–ನನ್ನನ್ನು, ಉತ್ತಾನ್–ಕರುಣಿಸಿ ಅಂಗೀಕರಿಸಿದರು.

ರಾಮಾನುಜಾಚಾರ್ಯರು, ಲೋಕದಲ್ಲಿ ತಮಗೆ ಶರಣು ಬಂದು ಆಶ್ರಯಿಸುವವರಲ್ಲದೆ, ತಮ್ಮ ಆಶ್ರಿತರನ್ನು ಸೇರಿ ದಿವ್ಯಗುಣಾನುಭವ ಕೈಂಕರ್ಯಗಳನ್ನು ಮಾಡುವವರಲ್ಲವೆಂದು ತಿಳಿದು, ವಿಷಯ ವಿರಕ್ತರಾಗಿ ತಮ್ಮನ್ನಾಶ್ರಯಿಸಿ ತಮಗೆ ಸೇವೆ ಮಾಡುವುದರಲ್ಲಿಯೇ ಸ್ವಭಾವವನ್ನು ಹೊಂದಿರುವಂತಹ ಭಾಗವತರ ಭೋಗ್ಯವಾದ ಶ್ರೀಪಾದಗಳನ್ನು ಆಶ್ರಯಿಸಿ ಅವರಿಗೆ ಸೇವೆ ಮಾಡುವಂತೆ ಈ ದಾಸನಿಗೆ ಆಣತಿಯಿತ್ತುದರಿಂದ ಕರುಣೆಯಿಂದ ಅವರೇ ನನಗೆ ಲಭ್ಯವಾಗಿರುವರು.

**ಇಡುಮೋಇನಿಯಶುವರ್ಕತ್ತಿಲ್, ಇನ್ನರ್ ನರಗಿಲಿಟ್ಟು**
**ಚ್ಚುಡುಮೋಯವತ್ತೈತ್ತೊಡರ್ ದರುತೊಲ್ಲೈ,**
**ಚ್ಚುಳಲ್ ಪಿರಪ್ಪಿಲ್**
**ನಡುಮೋಯಿನಿ ನಮ್ಮಿರಾಮಾನುಶನ್ ನಮ್ಮೈನಮ್ ವಶತ್ತೇ**
**ವಿಡುಮೋ ಶರಣಮೆನ್ರಾಲ್,**
**ಮನಮೋನೈಯಲ್‌ಮೇವುದರ್ಕೇ. 98**

ನಮ್–ನಮ್ಮನ್ನು ಉದ್ಧರಿಸುವುದಕ್ಕಾಗಿಯೇ ಅವತರಿಸಿದ, ಇರಾಮಾನುಶನ್–ರಾಮಾನುಜಾಚಾರ್ಯರು, ಶರಣಮ್ ಎನ್ರಾಲ್–(ಅವರನ್ನೇ) ರಕ್ಷಕರೆಂದು ಒಂದೇ ಸಾರಿ ಹೇಳಿದರೂ (ಸಂಸಾರಿಗಳಿಗೆ ಶಬ್ದಾದಿ ವಿಷಯ ಭೋಗಗಳಿಂದ), ಇನಿಯ–ಎತ್ತಿಕೊಂಡು, ಶುವರ್ಕತ್ತಿಲ್–ಸ್ವರ್ಗದಲ್ಲಿ, ಇಡುಮೋ–ಸ್ಥಾಪಿಸುವರು, ಇನ್ನರ್–ತಮ್ಮ ಶ್ರೀಪಾದಗಳನ್ನು ಆಶ್ರಯಿಸಿದ ಮೇಲೆ, ನರಗಿಲ್–ನರಕದಲ್ಲಿ, ಇಟ್ಟು–ಇರಿಸಿ, ಶುಡುಮೋ–ಪರಿತಪಿಸುವಂತೆ ಮಾಡುವರೋ, ಅವತ್ತೈ–ಆ ಸ್ವರ್ಗ ನರಕಗಳನ್ನು, ತೊಡರ್‌ತರು–ಅನುಸರಿಸಿರುವುದನ್ನು, ತೊಲ್ಲೈ–ಪುರಾತನವಾದ, ಶುಳಲ್–ಚಕ್ರದಂತೆ ಮತ್ತೆ ಮತ್ತೆ ಬರುತ್ತಾ, ಪಿರಪ್ಪಿಲ್–ಜನ್ಮಗಳಲ್ಲಿ, ನಡುಮೋ–ನಿಲ್ಲಿಸುವರೋ,

ಇನಿ–ಇನ್ನುಳಿದ ಕಾಲವನ್ನು, ನಮ್ಮೈ–ನಮ್ಮನ್ನು, ನಮ್‌ವಶತ್ತೇ–ನಮ್ಮ ಇಷ್ಟ ಪ್ರಕಾರವಾಗಿ (ನಡೆದುಕೊಳ್ಳಲು), ವಿಡುಮೋ–ಬಿಡುತ್ತಾರೋ, ಮನಮೇ–ಓ ಮನಸ್ಸೇ!, ಪೇವುದರ್ಕು–ಪ್ರಾಪ್ತಿ ನಿಮಿತ್ತವಾಗಿ, ನೈಯಲ್–ಚಿಂತಿಸಬಾರದು.

ಓ ಮನಸ್ಸೇ! ನಮ್ಮನ್ನು ರಕ್ಷಿಸುವುದಕ್ಕೆಂದೇ ಅವತರಿಸಿ ಬಂದಿರುವ, ಯಾವ ರಾಮಾನುಜರನ್ನು ರಕ್ಷಕರೆಂದು, ಅವರ ಶ್ರೀಪಾದಗಳನ್ನು ಆಶ್ರಯಿಸಿ ಶರಣಾಗತಿ ಯನ್ನು ಮಾಡಿದ ಬಳಿಕ, ತಮ್ಮನ್ನು ಎತ್ತಿ ಸ್ವರ್ಗದಲ್ಲಿರುವಂತೆ ಮಾಡುವರೋ, ನರಕದಲ್ಲಿಡುವರೋ, ಜನನ ಮರಣಾದಿ ಸಂಸಾರ ಚಕ್ರದಲ್ಲಿ ತೊಡಗಿಸುವರೋ, ಇಚ್ಛಾನುಸಾರ ತಿರುಗಲು ಬಿಡುವರೋ ಎಂಬ ಸಂದೇಹದಿಂದ ಪರಮಪದ ಪ್ರಾಪ್ತಿ ಯನ್ನು ಕುರಿತು ನೀವು ದುಃಖಿಸುವ ಕಾರಣವೇ ಇಲ್ಲ.

**ತರ್ಕಚ್ಚಮಣರುಮ್ ಶಾಕ್ಕಿಯಪೇಯ್‌ಗಳುಮ್,**
**ತಾಳ್‌ಶಡೈಯೋನ್**
**ಶೊರ್ಕತ್ತಶೋವರ್‌ಬರುಮ್ ಶೂನಿಯ ವಾದರುಮ್,**
**ನಾನ್ಮರೈಯುಮ್**
**ನಿರ್ಕಕ್ಕುರುಂಬು ಶೆಯ್‌ನೀಶರುಮ್ ಮಾಂಡನರ್ ನೀಣಿಲತ್ತೇ**
**ಪೊರ್ಕರ್ಪಗಮ್, ಎಮ್ಮಿರಾಮಾನುಶಮುನಿ ಪೋಂದಪಿನ್ನೇ.** 99

ಪೊನ್–ಬಯಸುವಂತಹ, ಕರ್ಪಗಮ್–ಕಲ್ಪವೃಕ್ಷದಂತೆ ಮಹತ್ತಾದ ಔದಾರ್ಯ ಉಳ್ಳ, ಎಮ್–(ಆ ಔದಾರ್ಯವನ್ನು) ನಮಗೆ ತೋರಿಸಿರುವ, ಇರಾಮಾನುಶಮುನಿ– ರಾಮಾನುಜಾಚಾರ್ಯರು, ನೀಳ್‌ನಿಲತ್ತೈ–ಈ ಮಹಾನ್ ಭೂಮಂಡಲದಲ್ಲಿ, ಪೋನ್‌ದಪಿನ್–ಬಂದು ಅವತರಿಸಿದ ಮೇಲೆ, ತರ್ಕಮ್–ಸಾಮರ್ಥ್ಯದಿಂದ ವಾದಿ ಸುತ್ತಾ ತಮ್ಮ ತಮ್ಮ ಮತಗಳನ್ನು ಬೆಳೆಸುತ್ತಿದ್ದ, ಶಮಣರುಮ್–ಜೈನರು, ಪೇಯ್–ತಮ್ಮ ವಾದದಲ್ಲಿ ಪಿಶಾಚದಂತೆ ಪಟ್ಟುಹಿಡಿಯುವ, ಶಾಕ್ಕಿಯರ್‌ಗಳುಮ್– ಬೌದ್ಧರು, ತಾಳ್–ನೇತಾಡುವ, ಶಡೈಯೊನ್–ಜಟೆಯನ್ನು ಧರಿಸಿ ಸಮ್ಮೋಹನ ಮಾಡುವ ರುದ್ರರು, ಶೊಲ್–ವಚನ ಶಾಸ್ತ್ರವಾದ ಶೈವಾಗಮವನ್ನು, ಕತ್ತ– ಅಧಿಕರಿಸುವಂತಹ, ಶೋಮ್ಬರುಮ್–ತಾಮಸರಾದ ಶೈವರು (ಪ್ರಮಾಣ, ಪ್ರಮಾತ, ಪ್ರಾಮೇಯ ಈ ಮೂರು ಇಲ್ಲವೆಂದು ವಾದಿಸುವ), ಶೂನಿಯ ವಾದರುಮ್–ಎಲ್ಲವೂ ಶೂನ್ಯವೆಂದು ವಾದಿಸುವ ಮಿಥ್ಯಾವಾದಿಗಳನ್ನೂ, ನಾಲ್–ನಾಲ್ಕು, ಮರೈಯುಮ್– ವೇದಗಳನ್ನು, ನಿರ್ಕ–ಪ್ರಮಾಣವೆಂದು ಅಂಗೀಕರಿಸದೆ (ವೇದಗಳಿಗೆ ಸಂಬಂಧವಿಲ್ಲದ ಅರ್ಥಗಳನ್ನು ಕಲ್ಪಿಸುತ್ತಾ), ಕರುಂಬುಶೆಯ್–ವೈಷಮ್ಯ ಮಾಡುತ್ತಿದ್ದ, ನೀಶರುಮ್–ನೀಚರಾದ ಕುದೃಷ್ಟಿ ಮತಸ್ಥರನ್ನು, ಮಾಂಡನರ್–ನಾಶಮಾಡಿದರು.

ಅಭೀಷ್ಟವನ್ನು ದೊರಕಿಸುವ ಕಲ್ಪವೃಕ್ಷದಂತಿರುವ ರಾಮಾನುಜಾಚಾರ್ಯರು ಅವತರಿಸಿ, ಶ್ರೀಭಾಷ್ಯಗ್ರಂಥವನ್ನು ರಚಿಸಿ, ವೇದಗಳ ಬಗ್ಗೆ ವಿಪರೀತ ಕಲ್ಪಿಸಿದ್ದವರನ್ನು ನಿರ್ನಾಮಮಾಡಿ, ಪರಮಾರ್ಥವನ್ನು ಪ್ರತಿಪಾದಿಸುತ್ತಾ, ತರ್ಕಸಾಮರ್ಥ್ಯ ದಿಂದಲೇ ತಮ್ಮ ಮತವನ್ನು ಅಭಿವೃದ್ಧಿ ಪಡಿಸುತ್ತಿದ್ದ, ಜೈನರನ್ನೂ, ತತ್ತ್ವಾರ್ಥ ವನ್ನರಿಯದೆ ಮೊಂಡುತನದ ಪಟ್ಟು ಪಿಶಾಚದಂತೆ ಹಿಡಿಯುವ ಬೌದ್ಧರನ್ನೂ, ಮೋಹನಶಾಸ್ತ್ರ ಪ್ರವರ್ತಕನಾದ ರುದ್ರನು ವಿವರಿಸಿದ ಶೈವಾಗಮವನ್ನು ಒಪ್ಪಿ ಕೊಂಡು ತಾಮಸರಾದ ಶೈವರನ್ನೂ, ಕಣ್ಣಿಗೆ ಕಾಣುವುದಷ್ಟೇ ಸತ್ಯ ಉಳಿದುದೆಲ್ಲಾ ಮಿಥ್ಯ ಎಂದು ವಾದಿಸುವ ಮಿಥ್ಯಾವಾದಿಗಳನ್ನೂ, ವೇದಗಳನ್ನು ಅಂಗೀಕರಿಸಿದರೂ ಅವಕ್ಕೆ ಅಪಾರ್ಥಗಳನ್ನು ಕಲ್ಪಿಸಿ ಅಡ್ಡದಾರಿಗೆಳೆದು ವೈಷಮ್ಯವನ್ನು ಬೆಳೆಸುತ್ತಿದ್ದ ಕುದೃಷ್ಟಿ ಮತದವರನ್ನೆಲ್ಲಾ ಜಯಿಸಿ ನಿರ್ನಾಮಗೊಳಿಸಿದರು.

**ಪೋಂದದೆನ್ನೆಂಗೆನ್ನುಮ್ ಪೊನ್ವಂಡು,**
**ಉನದಡಿಪ್ಪೋದಿಲೊಣ್ ಶೀರ್**
ಆನ್ದೆಳಿದೇನುಣ್ಣುಮರ್ನ್ದಿಡವೇಂಡಿ, ನಿನ್ಪಾಲದುವೇ
ಯೀನ್ದಿಡ ವೇಂಡುಮಿರಾಮಾನುಶವಿದು ಮನ್ರಿಯೊನ್ರುಮ್
ಮಾನ್ದಗಿಲ್ಲಾದು, ಇನಿಮತ್ತೊನ್ರು
**ಕಾಟ್ಟಿಮಯಕ್ಕಿಡಲೇ.** 100

ಎನ್–ನನ್ನ, ನೆಂಗು ಎನ್ನುಮ್–ಮನಸ್ಸು ಎಂಬುದು, ಪೊನ್–ರಮ್ಯವಾದ, ವಂಡು–ದುಂಬಿಯಾಗಿ, ಉನದು–ತಮ್ಮ, ಅಡಿ–ಶ್ರೀಪಾದಗಳೆಂಬ, ಪೋದಿಲ್–ಪುಷ್ಪಗಳಲ್ಲಿನ, ಒಣ್‌ಶೀರಾಮ್–ಶೈತ್ಯಮಾರ್ದವ ಸೌಗಂಧ್ಯಾದಿ ಕಲ್ಯಾಣಗುಣ ಗಳೆಂಬ, ತೆಳಿ–ನಿರ್ಮಲವಾದ, ತೇನ್–ಜೇನನ್ನು, ಉಂಡು–ಪಾನಮಾಡಿ, ಅಮರ್ನ್ದಿಡವೇಂಡಿ–ಆ ಸ್ಥಳದಲ್ಲಿಯೇ ನಿತ್ಯ ನಿತ್ಯ ವಾಸವನ್ನು ಮಾಡಬೇಕೆಂದು, ನಿನ್ಪಾಲ್–ತಮ್ಮಲ್ಲಿಗೆ, ಪೋನ್ದದು–ಬಂದುದು, ಇರಾಮಾನುಶಾ–ರಾಮಾನುಜಾ ಚಾರ್ಯರೇ, ಅದುವೇ–(ಅದರಿಂದ) ಅದನ್ನೇ, ಈನ್ದಿಡವೇಂಡುಮ್–(ತಾವು ಕೃಪೆ ಮಾಡಿ) ಒದಗಿಸಿಕೊಡಬೇಕು, ಇದುಅನ್ರಿ–ಇದನ್ನಲ್ಲದೆ, ಒನ್ರುಮ್–ಬೇರೆ ಯಾವುದನ್ನೂ, ಮಾಂದಗಿಲ್ಲಾದು–ಅನುಭವಿಸಲು ಸಾಧ್ಯವಿಲ್ಲ, ಇನಿ–ಇನ್ನುಮೇಲೆ, ಮತ್ತುಒನ್ರು–ಬೇರೆಯಾವುದನ್ನೂ, ಕಾಟ್ಟಿ–ನೋಡಿ, ಮಯಕ್ಕಿಡಲ್–ಭ್ರಮಿಸ ದಂತೆ ಕೃಪೆಮಾಡಿ.

ಓ ಯತಿರಾಜರೇ! ನನ್ನ ಮನಸ್ಸೆಂಬುದು ಒಂದು ಭ್ರಮರದಂತೆ ತಮ್ಮ ಪಾದಪದ್ಮಗಳಲ್ಲಿನ ಅಮೃತವೆಂಬ ಕಲ್ಯಾಣಗುಣಗಳನ್ನು ಪಾನಮಾಡಿ ಸನ್ನಿಧಿ

ಯಲ್ಲಿಯೇ ನಿತ್ಯವಾಸ ಮಾಡಬಯಸಿ ತಮ್ಮಲ್ಲಿ ಶರಣು ಬಂದಿರುವೆನು, ಆ ಕಲ್ಯಾಣ ಗುಣಗಳನ್ನೇ ನನಗೆ ಕರುಣಿಸಿ, ಮಾತ್ರವಲ್ಲ ನನ್ನ ಮನಸ್ಸು ಬೇರೊಂದರಲ್ಲಿ ಮೋಹ ಗೊಳ್ಳದಂತೆ ಕಾಪಾಡಿ.

ಮಯಕ್ಕು ವಿರುವಿನ್ನೈ ವಲ್ಲಿಯಿಲ್ ಪೂಂಡು, ಮದಿಮಯಂಗಿ
ತ್ತುಯಕ್ಕುಮ್ ಪಿರವಿಯಿಲ್ ತೋನ್ರಿಯವೆನ್ನೈ, ತ್ತುಯರಗತ್ತಿ
ಉಯ್ಯಕೊಂಡುನಲ್ಗುಮ್ ಇರಾಮಾನುಶವೆನ್ರದುನ್ನೈಯುನ್ನಿ
ನೆಯಕ್ಕುಮವರ್ಕಿದಿಳುಕ್ಕೆನ್ಬರ್, ನಲ್ಲವರೆನ್ರುನ್ನೈನ್ದೇ. 101

ಮಯಕ್ಕುಮ್–ಅಜ್ಞಾನವು ಆಕ್ರಮಿಸಲು, ಇರು–ಪುಣ್ಯಪಾಪಗಳೆಂಬ ಎರಡು ವಿಧವಾದ, ವಿನ್ನೈ–ಕರ್ಮಗಳುಂಟು, ವಲ್ಲಿಯಿಲ್–ದಾರದಿಂದ, ಪೂಂಡು–ಕಟ್ಟಿಕೊಂಡು, ಮದಿಮಯಂಗಿ–ಬುದ್ಧಿ ವಿಕಲ್ಪವಾಗಿ, ತುಯಕ್ಕುಮ್–(ಮನಸ್ಸನ್ನು) ಬದಲಿಸುತ್ತಿರುವ, ಪಿರವಿಯಿಲ್–ಜನ್ಮದಲ್ಲಿ, ತೋನ್ರಿಯ–ಹುಟ್ಟಿದ, ಎನ್ನೈ–ನನ್ನ, ತುಯರ್–ಕರ್ಮಫಲವಾದ ದುಃಖವನ್ನು, ಅಗತ್ತಿ–ನಾಶಮಾಡಿ, ಉಯ್ಯ–ಉದ್ಧಾರವಾಗುವಂತೆ, ಕಾಣು–ಅಂಗೀಕರಿಸಿ, ನಲ್‌ಗುಮ್–ಸ್ನೇಹವನ್ನು ಮಾಡಿದ, ಇರಾಮಾನುಶಾ–ರಾಮಾನುಜಾಚಾರ್ಯರೇ!, ಎನ್ರು–ಎಂದು, ಇದು–ಇದು, ಉನ್ನೈ–ತಮ್ಮನ್ನು, ಉನ್ನಿ–ಅನುಸಂಧಾನಮಾಡಿ, ನೈನ್ದು–ದ್ರವಿಸುವವರಿಗೆ, ಎನ್ರುಮ್–ಸರ್ವಕಾಲವೂ, ನೆಯಕ್ಕುಮವರ್ಕು–ಪ್ರೇಮ ಮಾಡುವವರಿಗೆ, ಇಳುಕ್ಕು–ಕಡಿಮೆ ಎಂದು; ನಲ್ಲವರ್–ಸತ್ಪುರುಷರಾದವರು, ಎನ್ಬರ್–ಹೇಳುತ್ತಾರೆ.

ವಿಷಯಾಸಕ್ತಿ ಹೊಂದಿದ ಮನಸ್ಸಿನಿಂದ ಮಾಡಿದ ದುಷ್ಕರ್ಮಗಳ ಫಲವಾಗಿ ಜನನ ಮರಣ ಚಕ್ರದಲ್ಲಿ ಸಿಕ್ಕಿ ತೊಳಲುತ್ತಾ ಸಂಚರಿಸುತ್ತಿದ್ದ ನನ್ನನ್ನು ಕಂಡು, ನನ್ನ ದುಃಖಗಳೆಲ್ಲವನ್ನೂ ನಾಶಮಾಡಿ ನಾನು ಉದ್ಧಾರವಾಗುವಂತೆ ಕೃಪೆಮಾಡಿದ ರಾಮಾನುಜಾಚಾರ್ಯರೇ!, ಎಂದು ತನ್ನ ಯಾವ ಪಾವನತ್ವವನ್ನು ಅನೇಕ ಸ್ಥಳ ಗಳಲ್ಲಿ ಹಿಂದೆ ಅನುಸಂಧಾನ ಮಾಡಿದಂತಹುದು; ತಮ್ಮನ್ನು ಅನುಸಂಧಾನ ಮಾಡುತ್ತಾ ದ್ರವಿಸಿ ಶಿಥಿಲವಾಗುವವರಿಗೆ, ಅನರ್ಥ್ಯವಾಗಿರುವುದೆಂದು, ಜ್ಞಾನಾಧಿಕ ರಾದವರು ಯಾವಾಗಲೂ ಹೇಳುವರು.

ನೈಯುಂವರ್ ಮನಮುನ್ ಕುಣಂಗಳೈಯುನ್ನಿ,
ಯೆನ್ ನಾವಿರುನ್ದು ಎವ್
ಮ್ಮೈಯನಿರಾಮಾನುಶನೆನ್ರಳೈಕ್ಕುಂವ್, ಅರುವಿನೈಯೇನ್
ಕೈಯುಂತೊಳುಂವ್ ಕಣ್ ಕರುದಿಡುಂಕಾಣಕ್ಕಡಲ್
ಪುಡೈಶೂಳ್
ವೈಯುಮಿದಿನಿಲ್, ಉನ್‌ವಣ್ಮೈಯೆನ್ಪಾಲೆನ್
ವಳರ್‌ನ್ದದುವೇ. 102

ಮನಮ್–(ನನ್ನ) ಮನಸ್ಸು, ಉನ್–ತಮ್ಮ, ಕುಣಂಗಳ್–ದಿವ್ಯಗುಣ ಗಳನ್ನು, ಉನ್ನಿ–ಅನುಸಂಧಾದ ಮಾಡುತ್ತಾ, ನೈಯುಂಮ್ (ಸವೆಯುತ್ತಿದೆ) ದುರ್ಬಲವಾಗುತ್ತಿದೆ, ಎನ್–ನನ್ನ, ನಾ–ನಾಲಗೆಯಾದರೋ, ಇರುನ್ದು–ಒಂದೇ ರೀತಿಯಲ್ಲಿದ್ದು, ಇರಾಮಾನುಶನ್–ರಾಮಾನುಜಾಚಾರ್ಯರು, ಎಮ್ ಅಯ್ಯನ್–ನಮ್ಮ ಸ್ವಾಮಿ (ನಮ್ಮ ಆಚಾರ್ಯರು), ಎನ್ರು–ಎಂದು, ಅಳೈಕ್ಕುಮ್–ಕರೆ ಯುತ್ತಿದೆ, ಅರುವಿನೈಯೇನ್–ಮಹಾಪಾಪಿಯಾದ ನನ್ನ, ಕೈಯುಮ್–ಕೈಗಳು, ತೊಳುಮ್–ಆಚಾರ್ಯರ ವಿಷಯದಲ್ಲಿ ಅಂಜಲಿ ಬದ್ಧವಾಗುತ್ತಿವೆ, ಕಣ್–ಕಣ್ಣುಗಳು, ಕಾಣ–(ಸದಾಕಾಲವೂ ಆಚಾರ್ಯರನ್ನು) ಸೇವಿಸುವುದಕ್ಕೆ, ಕರುದಿಡುಮ್–ಸಂಕಲ್ಪ ಮಾಡುತ್ತಿವೆ, ಕಡಲ್–ಸಮುದ್ರದಲ್ಲಿ, ಪುಡೈಶೂಳ್–ನಾಲ್ದಿಸೆಗಳಲ್ಲಿಯೂ ಸುತ್ತು ವರಿದಿರುವ, ಇದು–ಈ, ವೈಯತ್ತಿಲ್–ಭೂಮಿಯಲ್ಲಿ, ಉನ್–ತಮ್ಮ, ವಣ್ಮೈ–ಉದಾರತ್ವವು, ಎನ್ಪಾಲ್–ನನ್ನ ವಿಷಯವಾಗಿ, ಎನ್–ಯಾವ ಕಾರಣದಿಂದಲೋ, ವಳರ್‌ನ್ದದು–ವೃದ್ಧಿಹೊಂದುತ್ತಿರುವುದು.

ಓ ರಾಮಾನುಜರೇ! ನನ್ನ ಅಂತಃಕರಣವು (ಮನಸ್ಸು), ತಮ್ಮ ಕಲ್ಯಾಣ ಗುಣಗಳನ್ನು ಅನುಸಂಧಾನ ಮಾಡುತ್ತಾ ಹಾಗೆಯೇ ಸ್ಥಿರತೆಯನ್ನು ಪಡೆದಿದೆ. ನನ್ನ ನಾಲಗೆಯು ತಮ್ಮ ತಿರುನಾಮ ಸಂಕೀರ್ತನೆಯನ್ನು ಮಾಡುತ್ತಿದೆ. ಮಹಾ ಪಾಪಿಯಾದ ನನ್ನ ಕೈಗಳು ತಮಗೆ ನಮಸ್ಕಾರ ಮಾಡುತ್ತಿವೆ, ನನ್ನ ಕಣ್ಣು ಗಳಾದರೋ ಎಂದೆಂದೂ ತಮ್ಮ ದರ್ಶನಮಾಡಿ ಸೇವಿಸುವ ಆಕಾಂಕ್ಷೆಯಿಂದಿರುವುವು. ಬಹುಸಂಖ್ಯಾತ ಚೇತನರು ತಮ್ಮನ್ನು ಆಶ್ರಯಿಸಿರಬೇಕಾದರೆ, ತಮ್ಮ ಔದಾರ್ಯವು ದಾಸನ ಮೇಲೆ ವೃದ್ಧಿ ಹೊಂದುತ್ತ ಇರುವುದಲ್ಲಾ! ಇದಕ್ಕೆ ಕಾರಣವೇನು?

**ವಳರ್‍ನ್ದವೆಂಗೋಪ ಮಡಂಗಲೊನ್ರಾಯ್, ಅನುವಾಳವುಣನ್**
**ಕಿಳರ್‍ನ್ದಪೊನ್ನಾಗಂಗಿಳಿತ್ತವನ್, ಕೀರ್ತಿಪ್ಪಯಿರೆಳುಂನ್ದು**
**ವಿಳೈನ್ದಿಡುಮ್ ಶಿನ್ದೈಯಿರಾಮಾನುಶನೆನ್ರನ್ ವಿನೈನೋಯ್**
**ಕಳೈಂನ್ದುನನ್ ಜ್ಞಾನಮಳಿತ್ತವನ್, ಕೈಯಿಲ್ಕನಿಯೆನ್ನವೇ. 103**

ವಳರ್‍ನ್ದ–ಹೆಚ್ಚಿಗೆ ವೃದ್ಧಿಹೊಂದಿದ, ವೆಮ್–ಅತಿಕ್ರೂರವಾದ, ಕೋಪಮ್–ಕ್ರೋಧವುಳ್ಳ, ಒನ್ರು–ಸಾಟಿಯಿಲ್ಲದ, ಮಡಂಗಲಾಯ್–ನರಸಿಂಹನಾಗಿ, ಅನ್ರು–ಆಗ (ಪ್ರಹ್ಲಾದನ ಮೇಲೆ ಹಿರಣ್ಯಕಶಿಪುವು ಕೋಪ ತಾಳಿದಾಗ), ಕಿಳರ್‍ನ್ದ–ಚೆನ್ನಾಗಿ ಕೊಬ್ಬಿದ್ದ, ಪೊನ್–ಬಂಗಾರಮಯವಾಗಿದ್ದ (ವಜ್ರಕಾಯವಾಗಿದ್ದ), ಆಗಮ್–ದೇಹವನ್ನು, ಕಿಳಿತ್ತವನ್–ಸೀಳಿಹಾಕಿದವನ, ಕೀರ್ತಿ–ದಿವ್ಯಕೀರ್ತಿಯನ್ನು, ಪಯಿರ್–ಬೆಳೆಯಂತೆ, ಎಳುಂನ್ದು–ಬಿತ್ತಿಬೆಳೆಸಿ, ವಿಳೈನ್ದಿಡುಮ್–ಸಫಲವಾಗುವೋಪಾದಿಯಲ್ಲಿ ಬೆಳೆಸಿ ತುಂಬಿಕೊಂಡಿರುವ, ಶಿನ್ದೈ-ಹೃದಯವನ್ನುಳ್ಳ, ಇರಾಮಾನುಶನ್–ರಾಮಾನುಜಾಚಾರ್ಯರು, ಎನ್‌ದನ್–ನನ್ನ ಯಾವ, ಮೆಯ್–ಶರೀರವನ್ನು ಕೂಡಿ ಬಂದಿರುವ, ವಿನೈ–ಕರ್ಮಫಲವನ್ನೂ, ನೋಯ್–ದುಃಖವನ್ನೂ, ಕಳೈನ್ದು–ನಾಶ ಮಾಡಿ, ಕೈಯಿಲ್–ಕೈಯಲ್ಲಿರುವ, ಕನಿಯೆನ್ನ–ನೆಲ್ಲಿಕಾಯಿಯಂತೆ, ನಲ್–ಉನ್ನತವಾದ, ಜ್ಞಾನಮ್–ಜ್ಞಾನವನ್ನು, ಅಳಿತ್ತನನ್–ಕೃಪೆಯಿಂದ ಕರುಣಿಸಿದರು.

ಕೊಬ್ಬಿದ ಕ್ರೂರ ರಕ್ಕಸ ಹಿರಣ್ಯಾಸುರನು ಪರಮ ಭಾಗವತನಾದ ಪ್ರಹ್ಲಾದ ಕುಮಾರನನ್ನು, ಅಂತೆಯೇ ಎಲ್ಲ ಮಾನವರನ್ನೂ ಹಿಂಸಿಸುತ್ತಿರುವಾಗ, ಅತಿ ಭಯಂಕರವಾದ, ಕ್ರೂರವಾದ ಕೋಪವನ್ನು ತಾಳಿದ ನರಸಿಂಹನ ರೂಪದಲ್ಲಿ ಅವತರಿಸಿ, ಆ ಹಿರಣ್ಯಕಶಿಪುವಿನ ವಜ್ರದೇಹವನ್ನು ತೃಣದಂತೆ ಸೀಳಿ, ಧರ್ಮ ಸಂಸ್ಥಾಪನೆ ಮಾಡಿದ ಪರಮಾತ್ಮನಾದ ಶ್ರಿಯಃಪತಿಯ ದಿವ್ಯಕಲ್ಯಾಣಗುಣಗಳನ್ನು, ತಮ್ಮ ಹೃದಯ ಮಂದಿರದಲ್ಲಿಟ್ಟು ಅನುಭವಿಸಿಕೊಂಡಿರುವ ರಾಮಾನುಜಾಚಾರ್ಯರು, ತಮ್ಮ ನಿರ್ಹೇತುಕ ಕೃಪೆಯಿಂದ ನನಗೆ ಅಂಟಿಕೊಂಡಿದ್ದ ಪ್ರಕೃತಿ ಸಂಬಂಧದಿಂದ ಬಂದ ಎಲ್ಲಾ ದುಃಖಗಳನ್ನೂ ನಿವಾರಿಸಿ, ಸ್ವರೂಪ ಜ್ಞಾನವನ್ನು ಕರತಲಾಮಲಕ ವಾಗುವಂತೆ ನನಗೆ ಉಪದೇಶಮಾಡಿ ನನ್ನನ್ನು ಉದ್ಧರಿಸಿದರು.

**ಕೈಯಿಲ್ಕನಿಯೆನ್ನಕಣ್ಣನೈಕ್ಕಾಟ್ಟಿತ್ತರಿಲುಮ್, ಉನ್ರನ್**
**ಮೊಯ್ಯಿಕ್ಕಳಂಗಿಯೆಶೀರನ್ರಿ ವೇಂಡಿಲನ್ ಯಾನ್, ನಿರಯ**
**ತ್ತೊಯ್ಯಿಕ್ಕಿಡಕ್ಕಿಲುಮ್ ಶೋದಿವಿಣ್ ಶೇರಿಲುಮ್**
**ಇವ್ವರುಳ್ ನೀ**
**ಶೆಯ್ಯಿಲ್ತರಿಪ್ಪನ್, ಇರಾಮಾನುಶಾವೆನ್ ಶೆಳುಂಗೊಂಡಲೇ. 104**

ಶೆಳುವರ್_ವಿಲಕ್ಷಣವಾದ, ಕೊಂಡಲ್_ಮೇಘಗಳ ಮಾದರಿ ಪರಮೋದಾರಿಗಳಾಗಿ, ಎಮ್_ನಮಗೆ ಸ್ವಾಮಿಯಾಗಿ ಪ್ರಕಾಶಿಸುತ್ತಿರುವ, ಇರಾಮಾನುಶಾ_ರಾಮಾನುಜಾಚಾರ್ಯರೇ !, ಕಣ್ಣನ್ಕೈ_ಆಶ್ರಿತ ವತ್ಸಲನಾದ, ಸರ್ವೇಶ್ವರನಾದ ಕೃಷ್ಣಾವತಾರದ ಸ್ವಾಮಿಯನ್ನು, ಕೈಯಿನ್_ಅಂಗೈನ, ಕನಿಯೆನ್ನ_ನೆಲ್ಲಿಕಾಯಿಯಂತೆ, ಕಾಟ್ಟಿತ್ತರಿಲುಮ್_ತೋರಿಸಿದಾಗ್ಯೂ, ಉನ್‌ದನ್_ತಮ್ಮ, ಯಾವ, ಮೆಯಿಲ್_ಶರೀರದಲ್ಲಿ, ಪಿರಂಗಿಯ_ಪ್ರಕಾಶಿಸುತ್ತಿರುವ, ಶೀರ್‌ಅನ್ರಿ_ದಿವ್ಯಗುಣಗಳನ್ನು ಅಲ್ಲದೆ, ಯಾನ್_ನಾನು, ವೇಂಡಿಲನ್_(ಇತರೆ ಯಾವುದನ್ನೂ) ಬಯಸುವುದಿಲ್ಲ, ನಿರಯಮ್_ಸಂಸಾರರೂಪ ನರಕವೆಂಬ, ತೊಯಿಲ್_ಕಮರಿಯಲ್ಲಿ, ಕಿಡಕ್ಕಿಲುಮ್_ಬಿದ್ದಿರುವವನಾಗಿದ್ದರೂ, ಶೋದಿ_ನಿರವಧಿಕ ತೇಜೋಮಯವಾದ, ವಿಣ್_ಪರಮಪದವನ್ನು, ಶೇರಿಲುಮ್_ಸೇರಿದರೂ, ಇವ್ವರುಳ್_(ಇದಕ್ಕೆ ಬೇಕಾಗಿದ್ದ) ಅನುಗ್ರಹವನ್ನು, ನೀ_ತಾವು, ಶೆಯ್ಯಿಲ್_ದಯಪಾಲಿಸುವುದನ್ನು, ತರಿಪ್ಪನ್_ಧರಿಸೋಣ.

ಅತಿಮಾನುಷ ಚೇಷ್ಟಿತಗಳಿಂದ ಸಕಲ ಜನರ ಮನವನ್ನು ಸೂರೆಗೊಂಡ, ಆಶ್ರಿತ ಸುಲಭನಾದ ಸರ್ವೇಶ್ವರನಾದ ಶ್ರೀಕೃಷ್ಣನ ಗುಣಾನುಭವಗಳನ್ನು ಕರತಲಾಮಲಕವಾಗುವಂತೆ ಸಾಕ್ಷಾತ್ಕಾರ ಮಾಡಿಸಿದ ಯಾವ ರಾಮಾನುಜಾಚಾರ್ಯರ ದಿವ್ಯ ಮಂಗಳ ವಿಗ್ರಹದಲ್ಲಿ ಪ್ರಕಾಶಿಸುತ್ತಿರುವ ಅವರ ಕಲ್ಯಾಣಗುಣಗಳನ್ನಲ್ಲದೆ ನಾನು (ದಾಸನು) ಬೇರೆ ಯಾವುದನ್ನೂ ಬಯಸೆನು. ಈ ದಾಸನನ್ನು ತಾವು ಸಂಸಾರ ರೂಪದ ನರಕದಲ್ಲಿ ಬೀಳಿಸಿದರೂ, ತಮ್ಮನ್ನು ಆಶ್ರಯಿಸಿದವನಲ್ಲವೇ ಎಂದು ಕನಿಕರಿಸಿ, ತೇಜೋಮಯವಾದ ಪರಮಪದವನ್ನು ಸೇರಿಸಿದರೂ, ಎಲ್ಲ ಕಾಲದಲ್ಲಿಯೂ ತಮ್ಮ ಕಲ್ಯಾಣಗುಣಗಳನ್ನು ಅನುಭವಿಸುವಂತೆ ಕೃಪೆಮಾಡಿರೆಂದು ಬೇಡುವೆನೆನ್ನುತ್ತಾರೆ.

**ಶೆಳುನ್ದಿರೈಪ್ಪಾರ್ಕಡಲ್ ಕಂಡುಯಿಲ್ ಮಾಯನ್,**
**ತಿರುವಡಿಕ್ಕೀಳ್,**
**ವಿಳುಂದಿರುಪ್ಪಾರ್ ನೆಂಗಿಲ್ ಮೇವ್ರುನನ್ ಜ್ಞಾನಿ,**
**ನಲ್‌ವೇದಿಯರ್‌ಗಳ್**
**ತೊಳುಂದಿರುಪ್ಪಾದ ನಿರಮಾನುಶನ್ನೈತ್ತೊಳುಮ್ ಪೆರಿಯೋರ್**
**ಎಳುಂದಿರೈತ್ತಾಡುಮಿಡಮ್, ಅಡಿಯೋನುಕ್ಕಿರುಪ್ಪಿಡಮೇ. 105**

ಶೆಳುಮ್_ರಮ್ಯವಾದ, ತಿರೈ_ಅಲೆಗಳನ್ನುಳ್ಳ, ಪಾರ್ಕಡಲ್_ಕ್ಷೀರ ಸಮುದ್ರದಲ್ಲಿ, ಕಣ್‌ತುಯಿಲ್_ಯೋಗ ನಿದ್ರೆಯಲ್ಲಿರುವ, ಮಾಯನ್_ಆಶ್ಚರ್ಯಕರವಾದ ಸರ್ವೇಶ್ವರನ, ತಿರುವಡಿಕ್ಕೀಳ್_ಶ್ರೀಪಾದಗಳಲ್ಲಿ, ವಿಳುಂದಿರುಪ್ಪಾರ್_ಅವುಗಳೇ

ರಕ್ಷಕವೆಂದು ಇರುವವರ, ನೆಂಗಿಲ್–ಹೃದಯದಲ್ಲಿ, ಮೇವುವರ್–ಸೇರಿರುವ (ಹೊಂದಿರುವ), ನಲ್–ವಿಲಕ್ಷಣವಾದ, ಜ್ಞಾನಿ–ಜ್ಞಾನವಂತರಾದ, ನಲ್‌ವೇದಿಯರ್–ಪರಮ ವೈದಿಕರಾದವರೂ, ಇರಾಮಾನುಶನ್ನೈ–ರಾಮಾನುಜಾಚಾರ್ಯರನ್ನು, ತೊಳುವರ್–ಸದಾ ಅನುಭವಿಸುತ್ತಿರುವ, ಪೆರಿಯೊರ್–ಮಹಾತ್ಮರು, ಎಳುನ್ದು–ಎದ್ದು, ಆಡುವರ್ ಇಡವರ್–ಆನಂದ ಪರವಶತೆಯಿಂದ ನೃತ್ಯ, ಗಾನ, ಸಂಕೀರ್ತನೆಗಳಲ್ಲಿರುವ, ಅಡಿಯೇನುಕ್ಕು–ಅವರ ಅಡಿಯವನಾದ ನನಗೆ, ಇರುಪ್ಪಿಡಮ್ ವಾಸಮಾಡುವ ಸ್ಥಳವು.

ಸರ್ವವಿಧದಲ್ಲೂ ಮನೋಹರವಾಗಿರುವ ಕ್ಷೀರಾಬ್ಧಿಯಲ್ಲಿ ಆದಿಶೇಷನ ತಲ್ಪದಲ್ಲಿ, ಜಗದ್ರಕ್ಷಣಾರ್ಥ ಯೋಗನಿದ್ರೆಯಲ್ಲಿರುವ ಶ್ರಿಯಃಪತಿಯ ಪಾದಾರವಿಂದಗಳನ್ನೇ ಸರ್ವರಕ್ಷಕವೆಂದು ವಿಶ್ವಾಸ ಹೊಂದಿರುವ, ಯೋಗೀಶ್ವರರಾದ, ಅಪೇಕ್ಷಿತ ಕಲ್ಯಾಣ ಗುಣಪೂರ್ಣರಾದ ವೈದಿಕ ಪರಮ ಜ್ಞಾನಿಗಳಿಂದ ಸದಾ ಸೇವೆ ಪಡೆಯುತ್ತಿರುವ ಪಾದಾರವಿಂದಗಳನ್ನುಳ್ಳ ರಾಮಾನುಜಾಚಾರ್ಯರನ್ನು ಆಶ್ರಯಿಸಿ, ಆನಂದ ಪರವಶರಾಗಿ ನೃತ್ಯ, ಸಂಕೀರ್ತನಗಳನ್ನು ಮಾಡುತ್ತಿರುವ ಸ್ಥಳಗಳೇ ನಮಗೆ ಸಮ್ಮತವಾದ ವಾಸಸ್ಥಳವು ಎನ್ನುತ್ತಾರೆ ತಿರುವರಂಗತ್ತ ಮುದನಾರ್ ಅವರು.

ಇರುಪ್ಪಿಡಮ್ ವೈಗುಂದಮ್ ವೇಂಗಡಮ್,
ಮಾಲಿರುಂಶೋಲೈಯೆನ್ನುಮ್
ಪೊರುಪ್ಪಿಡಮ್ ಮಾಯನಕ್ಕೆನ್ಬರ್ ನಲ್ಲೋರ್,
ಅವೈದನ್ನೊಡುವನ್ದ
ನ್ದಿರುಪ್ಪಿಡಮ್ ಮಾಯನಿರಾಮಾನುಶನ್ ಮನತ್ತಿನ್ರವನ್‌ವ
ನ್ದಿರುಪ್ಪಿಡಮ್, ಎನ್ರನಿದಯತ್ತುಳ್ಳೇತನಕ್ಕಿನ್ಪುರವೇ. 106

ಮಾಯನಕ್ಕು–ಆಶ್ಚರ್ಯಭೂತನಾದ ಸರ್ವೇಶ್ವರನಿಗೆ, ಇರುಪ್ಪಿಡುಮ್–ನೆಲೆಸಲು ಸ್ಥಳಗಳಾದ, ವೈಕುಂನ್ದಮ್–ಪರಮಪದವಾದ ಶ್ರೀವೈಕುಂಠವು, ವೇಂಗಡ–ತಿರುಪತಿ (ತಿರುಮಲ), ಮಾಲಿರುಂಶೋಲೈ–ತಿರುಮಾಲಿರುಂಶೋಲೈ ಎಂದು ಪ್ರಸಿದ್ಧಿ ಹೊಂದಿರುವ, ಪೊರುಪ್ಪು–ಪರ್ವತದಲ್ಲಿ, ಇಡಮ್–ನಿತ್ಯವಾಸಮಾಡುವ, ನಲ್ಲೋರ್–ಭಗವದ್ಭಕ್ತರುಗಳು, ಎನ್ಬರ್–ಎಂಬುವ, ಮಾಯನ್–ಇಂತಹ ಸರ್ವೇಶ್ವರನು, ಅವೈತನ್ನೊಡುವ್–ಅವನು ತನ್ನೊಡನೆ ಆ ಸ್ಥಳಗಳಲ್ಲಿ, ವನ್ದು–ಬಂದು, ಇರುಪ್ಪಿಡಮ್–ನೆಲೆಸಿರುವ ಸ್ಥಳವು, ಇರಾಮಾನುಶನ್ ಮನತ್ತು–ರಾಮಾನುಜಾಚಾರ್ಯರ ಹೃದಯದಲ್ಲಿ, ಅವನ್–ಆ ಆಚಾರ್ಯರು, ಇನ್ರು–ಈಗ,

ವನ್ದು–ಬಂದು, ತನಕ್ಕು–ನನಗೆ, ಇನ್ಬು–ಅತಿಶಯವಾದ ಸುಖವನ್ನು, ಉರ–ಹೊಂದಿರುವಂತೆ, ಇರುಪ್ಪಿಡಮ್–ವಾಸವಾಗಿರುವ ಸ್ಥಳವು, ಎನ್ದನ್–ನನ್ನ ಯಾವ, ಇದಯತ್ತುಳ್ಳೇ–ಹೃದಯದಲ್ಲಿಯೇ ಇದೆ.

ಭಕ್ತಿ ಪಾರವಶ್ಯನಾದಂತಹ ಸರ್ವೇಶ್ವರನು, ಶ್ರೀವೈಕುಂಠ, ಶೇಷಾಚಲವೆಂಬ ತಿರುಮಲೆ, ತಿರುಮಾಲಿರುಂಶೋಲೈ ಮೊದಲಾದ ದಿವ್ಯದೇಶಗಳಲ್ಲಿ ನಿತ್ಯವಾಸ ಮಾಡುತ್ತಿರುವನೆಂಬ ವಿಚಾರವನ್ನು ವಿಷಧೀಕರಿಸಿದ ಶ್ರೀಮದ್ರಾಮಾನುಜರ ದಿವ್ಯ ಹೃದಯದಲ್ಲಿ ಅತ್ಯಾನಂದದಿಂದ ಸದಾ ಪ್ರತಿಷ್ಠಿತನಾಗಿರುವನು. ಅಂತಹ ದಿವ್ಯದೇಶಗಳಲ್ಲಿರುವ ಸ್ವಾಮಿಯನ್ನು ತಮ್ಮ ಹೃದಯ ಮಂದಿರದಲ್ಲಿ ಸ್ಥಾಪಿಸಿಕೊಂಡಿರುವ ಯಾವ ರಾಮಾನುಜಾಚಾರ್ಯರು ನನ್ನ ಹೃದಯದಲ್ಲಿ ನಿರತಿಶಯ ಸುಖದಿಂದ ನಿತ್ಯವಾಸ ಮಾಡುತ್ತಿರುವರು; ಇದಕ್ಕಿಂತ ಹೆಚ್ಚಿನ ಭಾಗ್ಯ ಬೇಕೇ ಎನ್ನುತ್ತಾರೆ ತಿರುವರಂಗತ್ತ ಮುದನಾರ್ ಅವರು.

**ಇನ್ಬುತ್ತಶೀಲತ್ತಿರಾಮಾನುಶ, ವೆನ್ರುಮೆವ್ವಿಡತ್ತುಮ್**
**ಎನ್ಬುತ್ತನೋಯುಡಲ್ದೋರುಮ್ ಪಿರನ್ದಿರನ್ದು, ಎಣ್ಣರಿಯ**
**ತುನ್ಬುತ್ತುವೀಯಿನುಮ್ ಶೊಲ್ಲುವದೊನ್ರುಂಡು**
**ಉನ್ ತೊಂಡರ್‌ಗಟ್ಕೇ**
**ಯನ್ಬುತ್ತಿರುಕ್ಕುಂಬಡಿ,**
**ಯೆನ್ನೈಯಾಕ್ಕಿಯಂಗಾಟ್ಪಡುತ್ತೇ.** 107

ಇನ್ಬುತ್ತು–(ಅತ್ಯಂತ ನೀಚವಾದ ನನ್ನ ಹೃದಯವನ್ನು ಒಳ್ಳೆಯದೆಂದೇ ತಿಳಿದು ಬಂದು ಪ್ರವೇಶಿಸಿ) ಅತ್ಯಾನಂದದಿಂದ ನೆಲೆಸಿರುವ, ಶೀಲತ್ತು–ಸೌಶೀಲಗುಣಗಳಿಂದ ಕೂಡಿರುವ, ಇರಾಮಾನುಶ–ರಾಮಾನುಜಾಚಾರ್ಯರೇ! ಶೊಲ್ಲುವದು–ತಮ್ಮಲ್ಲಿ ಭಿನ್ನವಿಸಿಕೊಳ್ಳುವುದು, ಒನ್ರು–ಒಂದು (ಕೆಲಸವು) ವಿಷಯವು, ಉಂಡು–ಇರುವುದು (ಅದೇನೆಂದರೆ), ಎನ್ಬು–ಅವಯವಗಳೆಲ್ಲಾ, ಉತ್ತು–ವ್ಯಾಪಿಸಿಕೊಂಡಿರುವ, ನೋಯ್–ವ್ಯಾಧಿಗಳ ಗೂಡಾದ, ಉಡಲ್‌ದೋರುಮ್–ಪ್ರತಿದೇಹದಲ್ಲಿಯೂ, ಪಿರನ್ದು–ಹುಟ್ಟಿ, ಇರನ್ದು–ಮೃತಿ ಹೊಂದಿ, ಎಣ್‌ಅರಿಯ–ಅಸಂಖ್ಯಾತವಾದ, ತನ್ಬು–ದುಃಖವನ್ನು, ಉತ್ತು–ಅನುಭವಿಸಲು, ವೀಯಿನುಮ್–ಮುಳುಗಿಸಿದರೂ, ಎನ್ರುಮ್–ಎಲ್ಲ ಕಾಲದಲ್ಲೂ, ಎವ್ವಿಡತ್ತುಮ್–ಎಲ್ಲ ಸ್ಥಳಗಳಲ್ಲೂ, ಉನ್–ತಮ್ಮ (ಆಚಾರ್ಯರ), ತೊಂಡರ್‌ಗಟ್ಕೇ–ದಾಸರವಿಷಯದಂತೇ, ಅನ್ಬು–ಪ್ರೇಮವನ್ನು, ಉತ್ತು–ಉಂಟುಮಾಡಿ, ಇರುಕ್ಕುಮ್‌ಬಡಿ–ಇರುವಂತೆ, ಆಕ್ಕಿ–ಮಾಡಿ, ಎನ್ನೈ–ನನ್ನನ್ನು, ಅಂಗು–ಅವರ ಶ್ರೀಪಾದಗಳಲ್ಲಿ, ಆಳಪಡುತ್ತು–ದಾಸನನ್ನಾಗಿ ಮಾಡಿರುವರು.

ನೀಚನಾಗಿರುವ ನನ್ನಲ್ಲಿ ವ್ಯಾಮೋಹ ಹೊಂದಿ ಸಂಶ್ಲೇಷಿಸುವ ರಾಮಾನುಜಾಚಾರ್ಯರೇ! ಅಂಗಾಂಗಗಳಲ್ಲೆಲ್ಲಾ ಪ್ರಸರಿಸಿ ಬಾಧಿಸುವ ವ್ಯಾಧಿಗಳಿಗೆ ನೆಲೆಯಾದ ದೇಹವನ್ನು ಹೊಂದುತ್ತಲೂ, ಮತ್ತೆ ಸಾಯುತ್ತಲೂ, ಹುಟ್ಟುತ್ತಲೂ ಇರುವುದಕ್ಕೆ, ದುಃಖವನ್ನು ಅನುಭವಿಸುವುದಕ್ಕೇ ಇರುವ ನನ್ನನ್ನು, ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಯಲ್ಲೂ ತಮಗೆ ಶೇಷಭೂತರಾಗಿರುವವರ ವಿಷಯದಲ್ಲಿ ಅತ್ಯಂತ ವ್ಯಾಮೋಹವುಳ್ಳವನನ್ನಾಗಿಯೂ, ಅವರಿಗೆ ನನ್ನನ್ನು ಯಾವ ರೀತಿಯಲ್ಲಾದರೂ ಉಪಯೋಗಿಸುವಂತೆ ಕರುಣಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಿರುವಿರಲ್ಲಾ ಎನ್ನುತ್ತಾರೆ.

**ಅಂಗಯಲ್ ಪಾಯ್ ವಯಲ್ ತೆನ್ನರಂಗನ್,**
**ಅಣಿಯಾಗಮನ್ನುಮ್**
**ಪಂಗಯಮಾಮಲರ್ಪಾವೈಯೈಪ್ಪೋತ್ತುದುಮ್,**
**ಪತ್ತಿಯೆಲ್ಲಾಮ್**
**ತಂಗಿಯದೆನ್ನತ್ತಳೈತ್ತು ನೆಂಗೇನಮ್ತಲೈಮಿಶೈಯೇ**
**ಪೊಂಗಿಯ ಕೀರ್ತಿ, ಯಿರಾಮಾನುಶನಡಿಪ್ಪೂಮನ್ನವೇ.** 108

ನೆಂಗೇ–ಓ ಹೃದಯವೇ, ಪತ್ತಿ–ಭಕ್ತಿ ತತ್ವವಾದ, ಎಲ್ಲಾಮ್–ಸಮಸ್ತವನ್ನೂ, ತಂಗಿಯದೆನ್ನುಮ್–ಶಾಶ್ವತವಾಗಿ ನೆಲೆಸುವಂತೆ, ತಳೈತ್ತು–ಸಂಪೂರ್ಣವಾಗಿ, ಪೊಂಗಿಯ–ಪ್ರಸರಿಸಿರುವ, ಕೀರ್ತಿ–ಕೀರ್ತಿಯುಳ್ಳ, ಇರಾಮಾನುಶನ್–ರಾಮಾನುಜಾಚಾರ್ಯರ, ಅಡಿ–ಪಾದಾರವಿಂದಗಳು ಎಂಬ, ಪೂ–ಪುಷ್ಪವು (ತಲೆಯಲ್ಲಿ ಧರಿಸಲಿಕ್ಕೆಂದೇ ಇರುವ ಪಾದಪದ್ಮಗಳು), ನಮ್‌ತಲೈಮಿಶೈಯೇ–ನಮ್ಮ ತಲೆಯ ಮೇಲೆ, ಮನ್ನ–ನಿತ್ಯವಾಸ ಮಾಡುವಂತೆ, ಅಮ್–ಸುಂದರವಾದ, ಕಯಲ್–ಮೀನುಗಳು, ಪಾಯ್–ಎಗರುತ್ತಿರುವ, ವಯಲ್–ಹೊಲ ಗದ್ದೆಗಳಿಂದ, ತೆನ್–ರಮ್ಯವಾದ, ಅರಂಗನ್–ಉಭಯ ಕಾವೇರಿ ಮಧ್ಯದಲ್ಲಿ ಪವಡಿಸಿರುವ ಶ್ರೀರಂಗನಾಥನ, ಅಣಿ–ಮನೋಜ್ಞವಾದ, ಆಗಮ್–ವಕ್ಷಸ್ಥಲದಲ್ಲಿ, ಮನ್ನುಮ್–ನಿತ್ಯವಾಸ ಮಾಡುತ್ತಿರುವ, ಮಾ–ಶ್ಲಾಘ್ಯವಾದ, ಪಂಗಯ ಮಲರ್–ತಾವರೆ ಪುಷ್ಪದಲ್ಲಿ ಜನಿಸಿದ, ಪಾವೈಯೈ–ಶ್ರೀ ಮಹಾಲಕ್ಷ್ಮಿಯನ್ನು, ಪೋತ್ತುದುಮ್–ಆಶ್ರಯಿಸು ಎಂಬುದಾಗಿ ಹೇಳುತ್ತಾರೆ.

ಓ ಮನಸ್ಸೇ! ರಾಮಾನುಜಾಚಾರ್ಯರ ಶ್ರೀಪಾದಾರವಿಂದಗಳೆಂಬ, ಪರಮ ಭೋಗ್ಯವಾದ ಪುಷ್ಪಗಳನ್ನು ನಮ್ಮ ಶಿರಸ್ಸಿನ ಮೇಲೆ ಅಲಂಕರಿಸಿ ಶಾಶ್ವತವಾಗಿರಿಸಿಕೊಳ್ಳುವಂತೆ ಕರುಣಿಸಲೆಂದು, ಮೀನುಗಳಿಂದ ತುಂಬಿದ, ಜಲಾವೃತ ಸಂಪದ್ಭರಿತವಾದ ಹೊಲಗದ್ದೆಗಳಿಂದ ಕೂಡಿದ ಶ್ರೀರಂಗಕ್ಷೇತ್ರದಲ್ಲಿ ಪವಡಿಸಿರುವ ಶ್ರಿಯಃಪತಿಯಾದ ಶ್ರೀರಂಗನಾಥನ ಯಾವ ವಕ್ಷಸ್ಥಳಾಭರಣವಾಗಿ ನಿತ್ಯವಾಸಮಾಡಿಕೊಂಡಿರುವ

ಕಮಲೋದ್ಭವೆಯಾದ ಶ್ರೀ ಮಹಾಲಕ್ಷ್ಮಿದೇವಿಯನ್ನು ಆಶ್ರಯಿಸಿ ಮಂಗಳಾಶಾಸನ ಮಾಡೋಣ ಎಂದು ಅಷ್ಟೋತ್ತರ ಶತ ಪಾಶುರಗಳನ್ನು ತಿರುವರಂಗತ್ತ ಮುದನಾರ್ ಅವರು ರಚಿಸಿದ **ಇರಾಮಾನುಶ ನೂತ್ತಂದಾದಿ** ಎಂಬುದು **ಪ್ರಪನ್ನ ಗಾಯತ್ರಿ** ಎಂದು ಪ್ರಸಿದ್ಧವಾಗಿರುವ ಈ ದಿವ್ಯಪ್ರಬಂಧವನ್ನು ಕನ್ನಡದಲ್ಲಿ ತಮಿಳು ಮೂಲ, ಪ್ರತಿಪದಾರ್ಥ ಮತ್ತು ತಾತ್ಪರ್ಯಗಳನ್ನು ಆಚಾರ್ಯರ ತಿರುವಡಿಗಳ ದಾಸರ ದಾಸನಾದ, ಪ್ರೊ|| ಹೆಚ್. ಪುಟ್ಟಸ್ವಾಮಿ ಅರ್ಥಾತ್ ಹಾರೋಹಳ್ಳಿ ತಿರುವೇಂಗಡಶರ್ಮನಿಂದ ರಾಯಪೇಟೆ ಶ್ರೀನಿವಾಸ ರಾಮಾನುಜದಾಸರ ಆಂಧ್ರಭಾಷೆಯ ನಿತ್ಯಾನುಸಂಧಾನದ ಆಧಾರದಿಂದ ಅನುವಾದಿಸಲ್ಪಟ್ಟಿದೆ.

ಮೊದಲಿನ ಪಾಶುರದಲ್ಲಿ, " ಪೂಮನ್ನುಮಾದು " ಎಂದರು, ಈ ಕೊನೆಯ ಪಾಶುರದಲ್ಲಿ, " ಪಂಗಯ ಮಾಮಲರ್ ಪಾವೈ " ಎಂದು ಹೇಳುತ್ತಿರುವರು. ಅಲ್ಲಿ, " ಪೊರುಂದಿಯ " ಎಂದರು, ಇಲ್ಲಿ, " ಅಣಿಯಾಗ ಮನ್ನುಮ್ " ಎನ್ನುತ್ತಿದ್ದಾರೆ. ಅಲ್ಲಿ, " ಇರಾಮಾನುಶನ್ ಚರಣಾರವಿಂದಂ ನಾಮ್‌ಮನ್ನಿವಾಳ " ಎಂದೂ ಇಲ್ಲಿ, " ತಲಮಿಶೈಯೇ ಇರಾಮಾನುಶನಡಿ ಪೂಮನ್ನ " ಎನ್ನುತ್ತಿದ್ದಾರೆ, ಮತ್ತೆ ಅಲ್ಲಿ, " ನೆಂಗೇ " ಎಂದು ಹೃದಯವನ್ನು ಸೇರಿಸಿಕೊಂಡು ಪ್ರಾರಂಭಿಸಿ ಇಲ್ಲಿ " ನೆಂಗೇ " ಯೆಂದು ಹೃದಯದೊಂದಿಗೆ ಅನುಸಂಧಾನ ಮಾಡುತ್ತಾ ಮುಗಿಸುತ್ತಿದ್ದಾರೆ. ಇದು ಅಂತ್ಯಾದಿ ಶೈಲಿಯಲ್ಲಿ ರಚಿಸಿರುವ ದಿವ್ಯಪ್ರಬಂಧವಾದುದರಿಂದ ಕೊನೆಯ ಪಾಶುರದ ಕೊನೆಯ (ಅಂತ್ಯ) ಪದವು " ಪೂಮನ್ನವೇ " ಇರುವುದು, ಪ್ರಬಂಧದ ಪ್ರಥಮ (ಆದಿ) ಪದವು " ಪೂಮನ್ನುಮಾದು " ಇರುವುದರಿಂದ ಅಂತ್ಯಾದಿಯು ನಿರಂತರ ವಾಗಿರುವುದು.

ಇದರಿಂದ ಈ **" ಇರಾಮಾನುಶನೂತ್ತಂದಾದಿ "** **(ರಾಮಾನುಜ ನೂರೆಂಟಂತ್ಯಾದಿ)** ದಿವ್ಯಪ್ರಬಂಧವು, ಇಚ್ಛಿಸುವ ಎಲ್ಲ ಅಭಿವೃದ್ಧಿಯೂ ಆಗಲು, ಪ್ರಾಪ್ಯಸಿದ್ಧಿಗೆ, ಸ್ವರೂಪಾನುರೂಪವಾದ, ಸಂಪತ್ಸಿದ್ಧಿಗೆ ಮೂಲವಾದ, ಸಕಲಾತ್ಮ ರಿಗೂ ಅವರವರ ಅಧಿಕಾರಕ್ಕೆ ತಕ್ಕಂತೆ, ಅಪೇಕ್ಷಿತ ಸಂಪದ್ವಿಶೇಷಗಳನ್ನು ಶ್ರೀ ಮಹಾ ಲಕ್ಷ್ಮಿಯು ತನ್ನ ಕಟಾಕ್ಷ ವಿಶೇಷದಿಂದ ಕೃಪೆಮಾಡುವಳೆಂಬುದು ಪ್ರಾಪ್ಯವಾಗು ವುದು ಆಚಾರ್ಯರ ಚರಣಾರವಿಂದಗಳಿಂದಲೇ ಎಂದೂ, ಇದಕ್ಕೆ ಅಧಿಕಾರವು ಈ ಪ್ರಬಂಧವನ್ನು ಶ್ರದ್ಧೆಯಿಂದ ಅನುಸಂಧಾನಮಾಡಿ ಪ್ರಾವಣ್ಯ ಪಡೆಯುವರಿಗೇ ಎಂದು ತಿಳಿಯತಕ್ಕದ್ದು.

**ಎಂಬೆರುಮಾನ್ ತಿರುವಡಿಗಳೇ ಶರಣಂ**

**ತಿರುವರಂಗತ್ತಮುದನಾರ್ ತಿರುವಡಿಗಳೇ ಶರಣಂ**

—0—

# ಧಾಟೀ ಪಂಚಕಂ

ಪಾಷಂಡ-ದ್ರುಮಷಂಡ-ದಾವದಹನಃ ಚಾರ್ವಾಕ-ಶೈಲಾಶನಿಃ
ಬೌದ್ಧಧ್ವಾಂತ-ನಿರಾಸ-ವಾಸರಪತಿಃ ಜೈನೇಭ-ಕಂಠೀರವಃ ।
ಮಾಯಾವಾದಿ-ಭುಜಂಗ-ಗಾರುಡಮಣಿಃ ತ್ರೈವಿದ್ಯ ಚೂಡಾಮಣಿಃ
ಶ್ರೀರಂಗೇಶ-ಜಯಧ್ವಜೋ ವಿಜಯತೇ ರಾಮಾನುಜೋಽಯಂ ಮುನಿಃ ॥ ೧ ॥

ಪಾಷಂಡಷಂಡ-ಗಿರಿಖಂಡನ-ವಜ್ರದಂಡಾಃ
ಪ್ರಚ್ಛನ್ನ-ಬೌದ್ಧ-ಮಕರಾಲಯ-ಮಂಥದಂಡಾಃ ।
ವೇದಾಂತಸಾರ-ಸುಖದರ್ಶನ-ದೀಪದಂಡಾಃ
ರಾಮಾನುಜಸ್ಯ ವಿಲಸಂತಿ ಮುನೇಸ್ತ್ರಿದಂಡಾಃ ॥ ॥ ೨ ॥

ಚಾರಿತ್ರೋದ್ಧಾರದಂಡಂ ಚತುರನಯಪಥಾಲಂಕ್ರಿಯಾ-ಕೇತುದಂಡಂ
ಸದ್ವಿದ್ಯಾದೀಪದಂಡಂ ಸಕಲಕಲಿಕಥಾ-ಸಂಹೃತೇಃ ಕಾಲದಂಡಂ ।
ತ್ರಯ್ಯಂತಾಲಂಬದಂಡಂ ತ್ರಿಭುವನವಿಜಯಚ್ಛತ್ರ ಸೌವರ್ಣ ದಂಡಂ
ಧತ್ತೇ ರಾಮಾನುಜಾರ್ಯಃ ಪ್ರತಕಥಕಶಿರೋ ವಜ್ರದಂಡಂ ತ್ರಿದಂಡಂ ॥ ೩ ॥

ತ್ರಯ್ಯಾಮಾಂಗಲ್ಯಸೂತ್ರಂ ತ್ರಿಯುಗ-ಯುಗಪದಾರೋಹಣಾಲಂಬ-ಸೂತ್ರಂ
ಸದ್ವಿದ್ಯಾದೀಪಸೂತ್ರಂ ಸಕಲಕಲಿಕಥಾ-ಸಂಹೃತೇಃ ಕಾಲಸೂತ್ರಂ ।
ಪ್ರಜ್ಞಾಸೂತ್ರಂ ಬುಧಾನಾಂ ಪ್ರಶಮಧನ-ಮನಃ ಪದ್ಮಿನೀ-ನಾಳಸೂತ್ರಂ
ರಕ್ಷಾಸೂತ್ರಂ ಮುನೀನಾಂ ಜಯತಿ ಯತಿಪತೇಃ ವಕ್ಷಸಿ ಬ್ರಹ್ಮಸೂತ್ರಂ ॥ ೪ ॥

ಪಾಷಂಡಸಾಗರಮಹಾ-ಬಡಬಾಮುಖಾಗ್ನಿಃ
ಶ್ರೀರಂಗರಾಜ-ಚರಣಾಂಬುಜ-ಮೂಲದಾಸಃ ।
ಶ್ರೀ ವಿಷ್ಣು ಲೋಕಮಣಿಮಂಟಪ-ಮಾರ್ಗದಾಯೀ
ರಾಮಾನುಜೋ ವಿಜಯತೇ ಯತಿರಾಜರಾಜಃ ॥ ॥ ೫ ॥

# ಭಜ ಯತಿರಾಜ ಸ್ತೋತ್ರಂ

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||
ಶ್ರೀರಂಗೇಶ ಜಯಾಶ್ರಯಕೇತುಃ ಶ್ರಿತಜನ ಸಂರಕ್ಷಣ ಜೀವಾತುಃ |
ಭವ ಭಯ ಜಲಧೇರೇಷ ಹಿ ಸೇತುಃ ಪದ್ಮಾನೇತುಃ ಪ್ರಣತೌ ಹೇತುಃ ||

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||
ಆದೌ ಜಗದಾಧಾರಃ ಶೇಷಃ, ತದನು ಸುಮಿತ್ರಾ ನಂದನ ವೇಷಃ |
ತದುಪರಿ ಧೃತ ಹಲಮುಸಲವಿಶೇಷಃ, ತದನಂತರಮಭವತ್ ಗುರುರೇಷಃ ||

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||
ಪಾಪಹತೋ ವಾ ಪುಣ್ಯಯುತೋ ವಾ ಸುರನರತಿರ್ಯಕ್ ಜಾತಿಗತೋ ವಾ |
ರಾಮಾನುಜಪದತೀರ್ಥಾನ್ಮುಕ್ತಿಂ ವಿಂದತಿ ವಿಂದತಿ ವಿಂದತ್ಯೇವ ||

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||
ಗುಣ ಗುಣಿನೋರ್ಭೇದಃ ಕಿಲ ನಿತ್ಯಃ ಚಿದಚಿದ್ದ್ವಯ ಪರಭೇದಃ ಸತ್ಯಃ |
ತದ್ದ್ವಯದೇಹೋ ಹರಿರಿತಿ ತತ್ವಂ ಪಶ್ಯ ವಿಶಿಷ್ಟಾದ್ವೈತಂ ತತ್ವಂ ||

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||
ಚಿಂತಯ ಸರ್ವಂ ಚಿದಚಿದ್‌ರೂಪಂ ತನುರಿತಿ ತಸ್ಯ ಹರೇ ರನುರೂಪಂ |
ತಸ್ಮಾತ್ ಕಸ್ಮಿನ್ ಕಲಯಸಿ ಕೋಪಂ ಪಶ್ಚಾದ್ ಭಜಸಿ ದುರಾಪಂ ತಾಪಂ ||

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||
ಯಸ್ಯ ಮುಖಸ್ಥಾ ಯತಿಪತಿಸೂಕ್ತಿಃ ತಸ್ಯ ಕರಸ್ಥಾ ವಿಲಸತಿ ಮುಕ್ತಿಃ |
ನರಕೇ ಪತಿತಂ ನವನವಯುಕ್ತಿಃ ನಹಿ ರಕ್ಷತಿ ಸಾಮಾನ್ಯ ನಿರುಕ್ತಿಃ ||

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||
ಕಾಂತಿಮತೀ ಸುಕುಮಾರ ಕುಮಾರಂ ಕೇಶವಸಿಂಹಕಿಶೋರಮುದಾರಂ |
ರಾಮಾನುಜಂ ಅಹಿರಾಡವತಾರಂ ಮೂಕಾನ್ಯಾನ್ ಅಪಿ ಮೋಕ್ಷಯಿತಾರಂ ||

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||
ಕಾಷಾಯಾಂಬರ ಕವಚಿತಗಾತ್ರಂ ಕಲಿತಕಮಂಡಲುದಂಡ ಪವಿತ್ರಂ |
ವಿಧೃತಶಿಖಾಹರಿಣಾಜಿನಸೂತ್ರಂ ವ್ಯಾಖ್ಯಾತ_ದ್ವೈಪಾಯನ ಸೂತ್ರಂ ||

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||
ಯಾಮುನ ಪೂರ್ಣ ಕೃಪೋಜ್ಜ್ವಲ ಗಾತ್ರಂ ರಾಮಾಬ್ಜಾಕ್ಷ
ಮುನೀಕ್ಷಣ ಪಾತ್ರಂ ,
ಕೋಮಲ ಶಠರಿಪು ಪದಯುಗಮಾತ್ರಂ ಶ್ರೀಮಾಧವ ಸೇನಾಪತಿ ಮಿತ್ರಂ ||

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||
ಸಾಲಗ್ರಾಮೇ ಸರ್ವಹಿತಾರ್ಥಂ ಯೇನಾಸ್ಥಾಪಿ ಗುರೋಃ ಪದತೀರ್ಥಂ ||
ತತ್ಕುಲದೈವತಮಿಹ ಪುರುಷಾರ್ಥಂ ಸಕಲೋಪಾಯಾಧಿಕ ಚರಮಾರ್ಥಂ ||

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||
ಪ್ರವಚನಶಕ್ತಃ ಪ್ರಜ್ಞಾಯುಕ್ತಃ ಪರಹಿತಸಕ್ತಃ ಪರಮವಿರಕ್ತಃ ||
ನಾನಾದೈವತಕೋಪ್ಯುಕ್ತಃ ನ ಭವತಿ ಮುಕ್ತೋ ನ ಭವತಿ ಮುಕ್ತಃ ||

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||
ಸಂತ್ಯಜ ಸಕಲಮುಪಾಯಾಚರಣಂ ವ್ರಜ ರಾಮಾನುಜ ಚರಣೌ ಶರಣಂ |
ಪಶ್ಯಸಿ ತಮಸಃ ಪಾರಂ ನಿತ್ಯಂ ಸತ್ಯಂ ಸತ್ಯಂ ಪುನರಪಿ ಸತ್ಯಂ ||

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ||



ರಾಮಾನುಜಾರ್ಯ ದಿವ್ಯಾಜ್ಞಾ
ವರ್ಧತಾಂ ಅಭಿವರ್ಧತಾಂ |
ದಿಗಂತವ್ಯಾಪಿನೀ ಭೂಯಾತ್
ಸಾಹಿಲೋಕ ಹಿತೈಷಿಣಿ ||

|| ಸರ್ವೇಜನಾಃ ಸುಖಿನೋ ಭವಂತು ||

|| ಸಮಸ್ತ ಸನ್ಮಂಗಳಾನಿ ಭವಂತು ||

|| ಕೃಷ್ಣಾರ್ಪಣಮಸ್ತು ||

# ಗ್ರಂಥಕರ್ತರ ಪರಿಚಯ



**ಪ್ರೊ|| ಹಾರೋಹಳ್ಳಿ ತಿರುವೇಂಗಡ ಶರ್ಮಾ** (ಹೆಚ್. ಪುಟ್ಟಸ್ವಾಮಿ), ಇವರು ಬೆಂಗಳೂರು ಜಿಲ್ಲೆಯ ಹಾರೋಹಳ್ಳಿಯಲ್ಲಿ ಅರ್ಚಕ ಕುಟುಂಬದಲ್ಲಿ 2–2–1930ರಂದು ಜನಿಸಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಭೂವಿಜ್ಞಾನದಲ್ಲಿ ಎಂ.ಎಸ್ಸಿ., ಪದವೀಧರರಾಗಿ ಅದೇ ಕಾಲೇಜಿನಲ್ಲಿ, ಬಿ. ಎಂ. ಶ್ರೀನಿವಾಸಯ್ಯ ಇಂಜಿನಿಯರಿಂಗ್ ಕಾಲೇಜ್, ಬೆಂಗಳೂರು, ಹಾಗೂ ಹಾಸನದ ಮಲ್ನಾಡು ಇಂಜಿನಿಯರಿಂಗ್ ಕಾಲೇಜಿನಲ್ಲಿ ಅಧ್ಯಾಪಕ, ಸಹಪ್ರಾಧ್ಯಾಪಕ ಮತ್ತು ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದವರು.

ದ್ರಾವಿಡ ದಿವ್ಯ ಪ್ರಬಂಧಗಳಾದ ಕೋಯಿಲ್ ತಿರುವಾಯ್ಮೊಳಿಯು "**ದೇಗುಲಸಿರಿಬಾಯಿ ನುಡಿ** (1974)" ಮತ್ತು ಪೆರುಮಾಳ್ ತಿರುಮೊಳಿಯು "**ಕುಲಶೇಖರ ಶ್ರೀಸೂಕ್ತಿ** (1984)" ಎಂಬ ಹೆಸರುಗಳಲ್ಲಿ ಇವರಿಂದ ಕನ್ನಡಕ್ಕೆ ಅನುವಾದಗೊಂಡು ಪ್ರಕಟವಾಗಿವೆ. "**ಶ್ರೀವೈಷ್ಣವ ಸಂಧ್ಯಾವಂದನೆ** (1982)" "**ಶ್ರೀವೈಷ್ಣವ ಧರ್ಮಸಂಗ್ರಹ** (1986)" ಮತ್ತು "**ಶ್ರೀ ಶಠಜಿದ್ದರ್ಶನ ದರ್ಪಣ** (1988)" ಗಳು ಶ್ರೀಯುತರು ಪುಸ್ತಕ ರೂಪದಲ್ಲಿ ಸಂಪ್ರದಾಯವನ್ನು ಅರಿವು ಮಾಡಿಕೊಟ್ಟಿರುವ ಅಮೂಲ್ಯ ಗ್ರಂಥಗಳು.

ಪ್ರಸ್ತುತದ "**ಶ್ರೀಮದ್ರಾಮಾನುಜ ನೂರಂತ್ಯಾದಿ**" ಯು ತಿರುವರಂಗತ್ತಮುದನಾರ್ ಅವರ ಮೂಲ ದ್ರಾವಿಡ ಭಾಷೆಯ "**ಇರಾಮಾನುಶ ನೂತ್ತಂದಾದಿ**", ಪ್ರಪನ್ನ ಗಾಯತ್ರಿ ಎಂದು ಪ್ರಸಿದ್ಧಿ ಪಡೆದಿರುವುದರಿಂದ ಅದರ ಅಧ್ಯಯನ ಅನುಷ್ಠಾನಗಳಿಗೋಸ್ಕರ ಕನ್ನಡಿಗರಿಗೆ ನೀಡಿರುವ ಉತ್ತಮ ಕೊಡುಗೆಯಾಗಿದೆ.

ಸಜ್ಜನ ಮಿತ್ರ

**ಡಾ|| ಎಂ. ಎಸ್. ಯೋಗಾನರಸಿಂಹ ಪಂಡಿತ್**
224, ದೇಶಿಕಾ ರಸ್ತೆ, ಹಳೇ ಸಂತೆ ಪೇಟೆ, ಮೈಸೂರು–24.